ನವೋದಯದ ಭಾವವನ್ನು ಗಟ್ಟಿಯಾಗಿಸುವ ಮತ್ತೊಂದು ವಿಧಾನ ಹಿರಿಯರಿಂದ ಕಿರಿಯರಿಗೆ ಮಾರ್ಗದರ್ಶನ. ನಮ್ಮ ಶಾಲೆಯ ಹಿರಿಯ ವಿದ್ಯಾರ್ಥಿಗಳು ಸಂಪನ್ಮೂಲ ಮತ್ತು ಅನುಭವದಲ್ಲಿ ಹಿರಿಯರೇ. ಅವರುಗಳ ಸಹಾಯ ಮತ್ತು ಮಾರ್ಗದರ್ಶನ ಹಳೆಯ ವಿದ್ಯಾರ್ಥಿಗಳಲ್ಲೇ ಕಿರಿಯರಾದವರಿಗೆ ಲಭ್ಯವಾದಲ್ಲಿ ಧಾರವಾಡ ನವೋದಯದ ವಿದ್ಯಾರ್ಥಿ ಜಾಲ ಸುಭದ್ರವಾಗಿ ಬೆಳೆದು ನಿಲ್ಲುತ್ತದೆ. ಇದಕ್ಕಾಗಿ ಅಂತರ್ಜಾಲದ ಬ್ಲಾಗುಗಳು ಮತ್ತಿತರ ಮಾಧ್ಯಮಗಳು ಪೂರಕವಾಗಬಲ್ಲವು. ಈ ಮಾಧ್ಯಮಗಳಿಂದ ಕಿರಿಯರು ಹಿರಿಯರನ್ನು ಸಂಪರ್ಕಿಸಲು ಸಾಧ್ಯ. ಈ ಸಂಪರ್ಕಗಳಿಂದ ಒಬ್ಬರಿಗೊಬ್ಬರು ಪೂರಕವಾಗಿ ತಮ್ಮ ಕ್ಷೇತ್ರದಲ್ಲಿ ಬೆಳೆಯಬಹುದು, ತಮ್ಮ ಅನುಭವದ ಚೌಕಟ್ಟನ್ನು ವಿಸ್ತರಿಸಿಕೊಳ್ಳಬಹುದು ಹಾಗೂ ಮಿತಿಗಳನ್ನು ಮೀರಬಹುದು.

ಸಾಮೂಹಿಕ ಸಹಭಾಗಿತ್ವದಿಂದ ಶಾಲೆಗೆ ಅವಶ್ಯಕವಾದ ವಸ್ತುಗಳನ್ನು ಆದ್ಯತೆಯ ಮೇರೆಗೆ ಒದಗಿಸಿಕೊಡುವದು ಒಳ್ಳೆಯ ಹೆಜ್ಜೆಯಾಗಬಲ್ಲದು. ಈ ನಿಟ್ಟಿನಲ್ಲಿ ಎಲ್ಲರ ಇಚ್ಛಾಶಕ್ತಿ ಮತ್ತು ಉದಾರತೆಯು ಒಂದುಗೂಡಬೇಕಾದುದು ಅವಶ್ಯಕ. ಅಲುಮಿನಿ ನಿಧಿಗೆ ಆರ್ಥಿಕ ಸಹಾಯ ಈ ಹೆಜ್ಜೆಗೆ ಅಗತ್ಯವಾದ ಶಕ್ತಿಮೂಲ. ವ್ಯಕ್ತಿಗತ ಸಾಮರ್ಥ್ಯ ಮತ್ತು ಮಿತಿಗಳಲ್ಲೇ ಅಲುಮಿನಿ ದಿನದಂದು ನಿಧಿಗೆ ವಂತಿಗೆ ನೀಡುವದರಿಂದ ನಮ್ಮ ಆತ್ಮತೃಪ್ತಿ ಹಾಗೂ ನಮ್ಮ ಋಣಸಂದಾಯ ಎರಡೂ ಸಾಧ್ಯ. ಪ್ರತಿಭೆ ದೈವದತ್ತವಾದದ್ದು ಅದು ಕಲಿಸಲಾರದ್ದು ಎಂಬುದು ಚರ್ಚಾಸ್ಪದವಾದರೂ, ಪ್ರತಿಭೆಗೆ ಅವಕಾಶ ಮತ್ತು ಪರಿಸರದ ಅವಶ್ಯಕತೆ ಇದೆ ಎಂಬುದು ಒಪ್ಪಿತ ಸತ್ಯ. ಎಷ್ಟೋ ಸಲ ನಮ್ಮ ಮುಂದೆಯೇ ಪ್ರತಿಭೆಗಳು ಆರ್ಥಿಕ ಅನಾನುಕೂಲದಿಂದ ಕಮರಿ ಹೋಗುವುದೂ ಇದೆ, ಇದೊಂದು ದುರಂತವೇ ಸರಿ. ಈ ನಿಧಿಯ ಮೂಲಕ ಪ್ರತಿಭೆಗಳ ಪೋಷಣೆ ಸಾಧ್ಯ. ತಿರುಗಿ ಕೊಡುವುದು ಅನಾವಶ್ಯಕ ಹೊರೆ ಎಂಬ ಭಾವ ಮನಸ್ಸುಗಳಲ್ಲಿ ಉದ್ಭವವಾದರೆ ಅದು ನವೋದಯ ಎಂಬ ವ್ಯವಸ್ಥೆಯ ವಿಫಲತೆಯೇ ಸರಿ. ಇದು ಚೇತನಗಳ ಜಡತೆಯ ಸಂಕೇತ. ಬೆಳ್ಳಿಹಬ್ಬವು ಜಡಚೇತನಗಳನ್ನು ಬಡಿದೆಬ್ಬಿಸಲಿ.

ಶಾಲೆಗೆ ಅವಕಾಶ ಸಿಕ್ಕಾಗೆಲ್ಲ ಭೇಟಿ ನೀಡುವದು ಈ ಬಾಂಧವ್ಯವನ್ನು ಗಟ್ಟಿಗೊಳಿಸಲು ಸಹಕಾರಿ. ಅನಾಮಿಕನೊಬ್ಬ ಹೇಳಿದಂತೆ ಮಾತನಾಡುವ ಮನಸಿದ್ದರೆ ಗೋಡೆ ಕಲ್ಲುಗಳೂ ಕೂಡ ಮತನಾಡುತ್ತವಂತೆ, ನವೋದಯದ ಗೋಡೆ, ರಸ್ತೆ, ಮೈದಾನ ಸಾವಿರ ಕಥೆಗಳನ್ನು ಹೇಳುತ್ತವೆ. ಕೇಳುವ ಮನಸ್ಸು ಮತ್ತು ವ್ಯವಧಾನಗಳಿರಬೇಕಷ್ಟೆ.

ಬಹುಶಃ ನಾನಾಗ 11ನೇ ಇಯತ್ತೆಯಲ್ಲಿದ್ದೆ, ಮನೆಯಿಂದ ವಾಪಸ್ ಬರುವಾಗ ಪ್ರಯಾಣಿಕನೊಬ್ಬ ನನ್ನ ಜೊತೆ ಮಾತಿಗಿಳಿದ. ಆತ ಕೊನೆಗೆ ಹೇಳಿದ ಮಾತು ಇನ್ನೂ ನೆನಪಿದೆ ನನಗೆ– "ನವೋದಯದ ನಿಮಗ ಮಾಡಿದ್ ಉಪಕಾರಾ ತೀರಸ್ ಬೇಕ್ ಅಂದ್ರ ಅದಕ್ಕ ವಾಪಸ್ ನಿಮ್ಮ ಕೈಲೆ ಆಗಿದ್ ಮಾಡ್ರಿ. ನಿಮ್ಮಂಗ ಮುಂದಿನ ಹುಡುಗ್ರು ಉದ್ಧಾರ ಅಕ್ಕಾರು. ಅದು ಆಗ್ಲಿಲ್ಲ ಅಂದ್ರ ನಿಮ್ಮ ಸಾಲಿ ಇಟ್ಟಂಗಿ ಅಷ್ಟ ನೀವ ಬಿಟ್ಟಂಗ, ಜೀವ ಹಾಕ್ರಪಾ ಅದಕ್ಕ" ನನಗಾವಾಗ ಅರ್ಥವಾದುದ್ದು ಕಡಿಮೆಯೆ. ಸಾಮಾನ್ಯ(?) ಮನುಷ್ಯನೊಬ್ಬ ಹೇಳಿದ ಈ ಮಾತು ಎಷ್ಟೋ ಸಲ ನನ್ನನ್ನು ಕಾಡಿದ್ದುಂಟು. ಆ ಇಟ್ಟಿಗೆಗಳಿಗೆ ಜೀವ ತುಂಬಲು ನಾವು ಮಾಡಬಹುದಾದುದೇನು ಎಂಬುದು ಆ ಮನುಷ್ಯನಿಗೆ ಅರ್ಥವಾದಷ್ಟು ಸರಳವಾಗಿ ನನಗೇಕೆ ಅರ್ಥವಾಗುವದಿಲ್ಲ? ಅರ್ಥ ಕಾಣದಷ್ಟು ದಪ್ಪ ಬಣ್ಣದ ಕನ್ನಡಕ ಕಣ್ಣುಗಳಿಗೆ ಬಂದುಬಿಟ್ಟಿದೆಯೋ ಏನೋ?

ಮತ್ತೊಮ್ಮೆ ನವೋದಯಕ್ಕೆ ತಿರುಗಿ ಹೋದಾಗ ಅಲ್ಲಿರುವ ಮಕ್ಕಳ ಕಣ್ಣಲ್ಲಿ ನಾವು ಏನು ಕಾಣಬಹುದು? ನಮ್ಮನ್ನು ನಾವು ಕಾಣಬಹುದೇನೋ? ಅದರಲ್ಲಿ ಕೆಲವರು ಶಿಕ್ಷಕರಾಗುತ್ತಾರೆ, ತಂತ್ರಜ್ಞರು, ವೈದ್ಯರು, ಉತ್ತಮ ರೈತರೂ ಕೂಡ ಆಗುತ್ತಾರೆ. ನವೋದಯ ಎಂಬ ವ್ಯವಸ್ಥೆ ಆ ಕೆಲಸ ಮಾಡುತ್ತದೆ. ಆದರೆ ನಾವು ಏನು ಮಾಡಬಹುದು? ನೀವು ಏನಾದರೂ ಸಾಧಿಸಬಹುದು ಎಂಬ ಭರವಸೆಯನ್ನು ತುಂಬಲು ಪ್ರಯತ್ನಿಸಬಹುದು, ಕನಸುಗಳನ್ನು ಬಿತ್ತಬಹುದು, ಕನಸುಗಳಿಗೆ ಮೆಟ್ಟಿಲುಗಳನ್ನು ಕಟ್ಟಬಹುದು. ನಾವು ಕೊಡುವ ಕೊಡುಗೆಗಳಿಂದ ಇನ್ನಷ್ಟು ಗ್ರಾಮ್ಯ ಪ್ರತಿಭೆಗಳ ಬದುಕು ಹಸನಾಗಬಹುದು. ನಾವು ಕೊಟ್ಟ ಕೊಡುಗೆಗಳಿಂದ ಬೆಳೆಯುವ ಇನ್ನೊಬ್ಬ "ನಮ್ಮನ್ನು" ಅವರಲ್ಲಿ ಕಾಣೋಣ. ಅವರ ಕಣ್ಣುಗಳಲ್ಲಿ ಭರವಸೆಯ ಕಿರಣಗಳು ಉದಯಿಸಲಿ. ನಾವು ಮಾಡಬೇಕಾಗಿದ್ದು ಮತ್ತು ಮಾಡಬಹುದಾಗಿದ್ದು ಬಹುಶಃ ಅಷ್ಟೇ! ಅದು ಶಾಲೆ ನಮಗೆ ಕಟ್ಟಿಕೊಟ್ಟ ವ್ಯಕ್ತಿತ್ವ, ಅನುಭೂತಿಗಳಿಗೆ ಪ್ರತಿಯಾಗಿ ನಾವು ಕೊಡಬಹುದಾದ ಪುಟ್ಟ ಉಡುಗೊರೆ.

ಬದುಕಿನ ನೆಗೆಟಿವಿಟಿಗಳ ಮಧ್ಯೆಯೂ ಪಾಸಿಟಿವ್ ಸಂಗತಿಗಳನ್ನು ಹುಡುಕೋಣ. ಈ ಹುಡುಕುವಿಕೆ ನವೋದಯದ ಬಾಲ್ಯದ ಕ್ಷಣಗಳಿಂದಲೇ ಶುರುವಾಗಲಿ. ಗೋಡೆಗಳು ಹೇಳುವ ನಮ್ಮ ಬಾಲ್ಯದ ಕಥೆಗಳನ್ನು ಕೇಳೋಣ. ಈ ನೆನಪುಗಳಿಂದ ಹೃದಯ ಬೆಚ್ಚಗಾಗಲಿ. ಈ ಸುಂದರ ಅನುಭವಗಳನ್ನು ನೆನೆಸಿಕೊಳ್ಳಲು ಜನವರಿ 26–27 ಗಳು ವೇದಿಕೆಯಾಗಲಿ. ನಮ್ಮೆಲ್ಲರ ನವೋದಯ ಪ್ರೀತಿ ಅಭಿಮಾನ ಸಾವಿರ ಕವಲುಗಳಾಗಿ ಹರಿಯಲಿ, ನಮ್ಮೆಲ್ಲರ ಗತಕಾಲದ ನೆನಪು, ಭಾವಗಳನ್ನು ಅರ್ಥಪೂರ್ಣವಾಗಿ ಸಂಭ್ರಮಿಸೋಣ. ಬರುತ್ತಿರಲ್ಲವೇ?

ಇದು ನನ್ನ prism ಮೂಲಕ ನೋಡಿದ ನೋಟವಷ್ಟೇ. ನಾವು ನವೋದಯದವರು ಎಂಬ ನಮ್ಮಲ್ಲಿರುವ ಭಾವ ಹೀಗೆ ಹರಿಯುತ್ತಿರಲಿ ಎಂಬ ನಿಟ್ಟಿನಲ್ಲಿ ನನ್ನದೊಂದು ಸಣ್ಣ ಪ್ರಯತ್ನವಷ್ಟೇ. ಈ ಭಾವ ನಮ್ಮಲ್ಲಿ ಪುಟಿದೆದ್ದರೆ ನನ್ನ ಪುಟ್ಟ ಪ್ರಯತ್ನ ಸಾರ್ಥಕ ಆದಂತೆಯೇ. ನವೋದಯದವರು ಉಳಿದೆಲ್ಲರಿಗಿಂತ ಭಿನ್ನ ಎಂಬುದು ನಾವೆಲ್ಲರೂ ಸಾಮಾನ್ಯವಾಗಿ ಕೇಳಿದ ಮಾತುಗಳೇ. ಆ ಅಭಿಪ್ರಾಯ ಬಲವಾಗುವದು ಬೆಳ್ಳಿ ಹಬ್ಬದಿಂದ ಸಾಧ್ಯವಾಗಲಿ, ಆ ಭಿನ್ನತೆಗೆ ಹೊಸ ಅರ್ಥ ಹುಟ್ಟಲಿ ಎನ್ನುವದೇ ನನ್ನ ಆಶಯ.

**– ಅರುಣ ಪಾಗಾದ.**
12ನೇ ಬ್ಯಾಚ್



# Cognitive Learning Theory

The target audience for this article is both teachers and students as it details out two types of learning methods, one that exists since ages and the other which is a result of detailed innovative research that has shown proven results

### *Traditional Learning Method*

Historically, the traditional education was simple oral recitation, In a typical approach –It is teacher and Blackboard centric where students sat quietly at their places and listened to one individual after another recite his or her lesson, until each had been called upon. The teacher's primary activity was assigning and listening to these recitations; students studied at home. A test might be given at the end of a unit, and the process, which was called "assignment-study-recitation-test", was repeated. In addition to its overemphasis on verbal answers, reliance on rote memorization (memorization with no effort at understanding the meaning), However many students who were fast learners used to be the top performers and the slow learners always stayed non-performers.

### *Cognitive Learning Theory*

Cognitive theory views learning as an active mental process of acquiring, remembering, and using knowledge. Learning occurs with a change in knowledge that makes a change in behavior possible. Learning itself is not directly observable. The teacher structures the content of a learning activity and the learner takes an active role in processing it.

"Cognitive learning is the result of listening, watching, touching or experiencing."

Cognitive learning is a powerful mechanism that provides the means of knowledge, and goes well beyond simple imitation of others. Cognitive learning is defined as the acquisition of knowledge and skill by mental or cognitive processes — the procedures we have for manipulating information 'in our heads'. Cognitive processes include creating mental representations of physical objects and events, and other forms of information processing.

### *Benefits of Cognitive Learning*

Studies now show that cognitive learning is the main determinant with regards to evaluating a person's learning ability.

1. Improves learning: Cognitive skills primarily help the process of knowledge acquisition through physical objects and mental symbols representing events or figures. In fact, research shows that cognitive learning can separate advance thinkers from good learners. In essence, learning is easy when an individual has strong cognitive skills. On the other hand, learning becomes difficult when a person has weak cognitive skills.
2. Enhances concentration: Concentration is what allows you to focus your attention solely on one subject or thought, excluding everything else around you. It is an essential ability that one should have and nothing beats cognitive learning when it comes to improving concentration. In other words, learning through symbols and imagery can help improve concentration.
3. Cognitive Learning and Understanding: The perception allows us to pick up the information around us, for example the tongue, skin, ears, nostrils and eyes. These actions are sensed and analyzed by the brain
4. Cognitive Thinking and logical reasoning: Cognitive learning / thinking helps in improving relationship between reasoning and facts. Hence the students can become brighter and can solve problems with ease.

Digiclass® an ICT Solution from Pearson Education Services, is one such classroom solution that aims to empower teachers to produce interactive fun filled classroom sessions. It is currently being used by over 3,000 schools in India and abroad (Maldives, Nepal, UAE, etc.).

- **Shridhar N. Upadhye**
Shridhar of 3rd batch, works in Pearson Education Services Pvt Ltd, Bengaluru.

ಹಕ್ಕಿ–ಪಕ್ಷಿಗಳ ಚಿಲಿಪಿಲಿ ಶಬ್ದ ಕೇಳಿದೊಡನೆಯೇ
ಕಣ್ಬಿಟ್ಟು ಕಿಟಕಿಯೆಡೆ ನೋಡಿದರೆ... ಆಗಲೇ ಆಗಿತ್ತು
ಅರುಣೋದಯ...
ಶಿಸ್ತಿನ ಸಿಪಾಯಿಗಳಂತಿದ್ದ ಶಿಕ್ಷಕರು ಪಾಠ
ಹೇಳಿಕೊಟ್ಟು
ಅಂದು ಮಾಡಿಸಿದ್ದರು... ನಮ್ಮೆಲ್ಲರಿಗೂ
ಜ್ಞಾನೋದಯ !
ಇಂದು ನಮ್ಮೆಲ್ಲರಿಗೂ ತಂದಿದೆ ಸಂತೋಷ
ಸಂಭ್ರಮ,
25 ನೇ ವರ್ಷದ ಬೆಳ್ಳಿ ಹಬ್ಬದ ಆಚರಿಸುತ್ತಿರುವ
ನಮ್ಮ ಶಾಲೆ... ನವೋದಯ !

– **ಶಶಿಕಲಾ ಹೊನ್ನಳ್ಳಿ**

# ನವೋದಯ ಶಿಕ್ಷಣ ಹಾಗೂ ಶಿಕ್ಷಕರ ಸವಾಲುಗಳು.

ಶಿಕ್ಷಣವೆಂದರೆ ಸಂಸ್ಕಾರವೆಂದು ಅರ್ಥ. ಮಗುವಿನ ಬೌದ್ಧಿಕ, ದೈಹಿಕ, ಸಾಮಾಜಿಕ ಹಾಗೂ ಆಧ್ಯಾತ್ಮಿಕ ಹೀಗೆ ಸರ್ವಾಂಗೀಣ ಸಮನ್ವಯ ವಿಕಾಸವನ್ನುಂಟು ಮಾಡುವುದೇ ಶಿಕ್ಷಣದ ಮುಖ್ಯ ಉದ್ದೇಶವಾಗಿದೆ. ಈ ಹಿನ್ನೆಲೆಯಲ್ಲಿ ನಮ್ಮ ದೇಶದ ಮಾಜಿ ಪ್ರಧಾನ ಮಂತ್ರಿಗಳಾದ ರಾಜೀವ ಗಾಂಧಿಯವರ ಕನಸಿನ ಕೂಸಾದ ಜವಾಹರ ನವೋದಯ ವಿದ್ಯಾಲಯವು ರಾಷ್ಟ್ರಕ್ಕೆ ಬೇಕಾಗುವಂತಹ ಸಮರ್ಥ ವಿದ್ಯಾರ್ಥಿಗಳನ್ನು ರೂಪಿಸುವುದೇ ಅದರ ಧ್ಯೇಯವಾಗಿದೆ. ನವೋದಯ ಶಿಕ್ಷಣವು, ಇತರ ಶಿಕ್ಷಣ ಸಂಸ್ಥೆಗಳಂತೆ ಅಲ್ಲ. ಅಲ್ಲಿಯ ಶಿಕ್ಷಣದ ವೈಖರಿಯೇ ಬೇರೆ, ಅಲ್ಲಿಯ ಶಿಕ್ಷಕರು ಎದುರಿಸಬೇಕಾದ ಸವಾಲುಗಳೇ ಬೇರೆ. ನಾನು ಕಂಡಂತೆ ಅಲ್ಲಿನ ಶಿಕ್ಷಕರ ಸವಾಲುಗಳು ಮತ್ತು ಅವುಗಳನ್ನು ಎದುರಿಸಿದ ಶಿಕ್ಷಕರ ಶ್ರಮವನ್ನು ಈ ಬರಹದಲ್ಲಿ ನೆನಪಿಸಿಕೊಳ್ಳಬಯಸುತ್ತೇನೆ.

ಅದೊಂದು ವಸತಿ ಶಾಲೆಯಾದ್ದರಿಂದ ಎಲ್ಲ ಶಿಕ್ಷಕ, ಶಿಕ್ಷಕಿಯರು ವಿದ್ಯಾರ್ಥಿಗಳ ಜೊತೆ ಒಂದೇ ಆವರಣದಲ್ಲಿ ಇರುತ್ತಿದ್ದರು. ಅವರ ವೇಷ ಭೂಷಣ, ನಡೆ, ನುಡಿ ಅವರ ಆಚಾರ, ವಿಚಾರಗಳನ್ನು ನಾವು ವಿದ್ಯಾರ್ಥಿಗಳು ಅಕ್ಷರಶಃ ಪಾಲಿಸುತ್ತಿದ್ದೆವು. ಅವರ ಬದುಕೇ ನಮಗೆ ಜೀವನ ಸಂದೇಶವಾಗಿತ್ತು. ಈ ಸಂದರ್ಭದಲ್ಲಿ ಅವರಿಂದಾಗುವ ಒಂದು ಸಣ್ಣ ತಪ್ಪು ಆಚರಣೆಯೂ ಕೂಡ ನಮ್ಮ ಎಲ್ಲ ವಿದ್ಯಾರ್ಥಿ ಸಮೂಹವನ್ನು ತಪ್ಪು ದಾರಿಗೆ ತೆಗೆದುಕೊಂಡು ಹೋಗುವಂತಿತ್ತು. ಆದ್ದರಿಂದ ಅವರು ಪ್ರತಿ ಹೆಜ್ಜೆಯಲ್ಲಿ ಜಾಗ್ರತೆಯಿಂದ ನಡೆದುಕೊಳ್ಳುವುದು ನಿಜಕ್ಕೂ ಅವರ ಬದುಕಿಗೆ ಒಂದು ಸವಾಲಾಗಿತ್ತು.

ನವೋದಯ ವಿದ್ಯಾಲಯಕ್ಕೆ ಬಹುತೇಕ ಮಕ್ಕಳು ಗ್ರಾಮೀಣ ಪ್ರದೇಶದಿಂದ ಬಂದವರಾಗಿದ್ದರು, ಅವರು ಕನ್ನಡ ಮಾಧ್ಯಮದಲ್ಲಿಯೇ ರಾಜ್ಯ ಪಠ್ಯ ಕ್ರಮವನ್ನು ಓದಿದವರಾಗಿದ್ದರು. ಇಂತಹ ಮಕ್ಕಳಿಗೆ ಆಂಗ್ಲ ಮಾಧ್ಯಮದ ಮೂಲಕ ಸಿ.ಬಿ.ಎಸ್.ಇ. ಪಠ್ಯಕ್ರಮವನ್ನು ಬೋಧಿಸುವುದು ಸುಲಭದ ಮಾತಾಗಿರಲಿಲ್ಲ, ಆದರೆ ಅಲ್ಲಿಯ ಗುರುವೃಂದವು ತಮ್ಮ ಇಚ್ಛಾಶಕ್ತಿಯಿಂದ ಹಾಗೂ ಕ್ರಿಯಾಶಕ್ತಿಯಿಂದ ನಾವೆಲ್ಲರೂ ಪರಿಶ್ರಮವಹಿಸಿ ವಿದ್ಯಾರ್ಜನೆಯಲ್ಲಿ ಮುಂದೆ ಬರುವಂತೆ ಮಾಡಿದ ಅವರ ಪರಿಶ್ರಮಕ್ಕೆ ಬೆಲೆ ಕಟ್ಟಲು ಸಾಧ್ಯವಿಲ್ಲ.

ನಮ್ಮ ವಿದ್ಯಾಲಯದ ಆವಣದಲ್ಲಿಯೇ ಗುರುವೃಂದದವರ ವಸತಿ ಗೃಹಗಳಿದ್ದರೂ, ಅವರು ಅಲ್ಲಿ ಹೆಚ್ಚು ಸಮಯ ತಮ್ಮ ಕುಟುಂಬದವರೊಂದಿಗೆ ಕಳೆಯದೇ ನಮ್ಮೊಂದಿಗೆ ಸಮಯ ಕಳೆಯುತ್ತಿರುವ ಅವರ ಬದುಕು ನಿಜಕ್ಕೂ ಅನುಕರಣನೀಯ. ಇದು ಅವರಲ್ಲಿದ್ದ ಶೈಕ್ಷಣಿಕ ಕಳಕಳಿಯನ್ನು ತೋರಿಸುತ್ತದೆ. ನಮ್ಮನ್ನು ಅವರು ತಮ್ಮ ಮಕ್ಕಳಂತೆಯೇ ಪ್ರೀತಿಸುತ್ತಿದ್ದರು. ನಮ್ಮ ಪಾಲಿಗೆ ಅವರು ತಂದೆ, ತಾಯಿ, ಬಂಧು, ಬಳಗ ಅವರೇ ಆಗಿದ್ದರು. ನಾವು ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸಿದಾಗ ನಮಗೆ ಬೇಕಾದಂತಹ ವೇಷ–ಭೂಷಣ ಹಾಗೂ ಪರಿಕರಗಳನ್ನು ನಮ್ಮ ಶಿಕ್ಷಕರ ಕುಟುಂಬದವರೇ ಪೂರೈಸುತ್ತಿದ್ದರು. ಜೊತೆಗೆ ಆ ಕಾರ್ಯಕ್ರಮಗಳಲ್ಲಿ ತಾವು ಸಕ್ರಿಯವಾಗಿ ಪಾಲ್ಗೊಂಡು ಸಂಭ್ರಮಿಸುತ್ತಿದ್ದರು. ಅವರ ಆ ಹೃದಯ ವೈಶಾಲ್ಯತೆಗೆ ನಾನು ಕೃತಜ್ಞತೆಯ ನೂರು ನಮನಗಳನ್ನು ಸಲ್ಲಿಸುತ್ತೇನೆ.

ನಮ್ಮ ದೈನಂದಿನ ಕಾರ್ಯಗಳು ಬೆಳಿಗ್ಗೆ 5–30 ಕ್ಕೆ ಪ್ರಾರಂಭವಾಗಿ ರಾತ್ರಿ 10–00 ಘಂಟೆಗೆ ಮುಕ್ತಾಯಗೊಳ್ಳುತ್ತಿದ್ದವು. ಬೆಳಗಿನ ಜಾಗಿಂಗ್, ನಂತರ ಪ್ರಾರ್ಥನೆ, ಬೆಳಗಿನ ಉಪಹಾರ, ತರಗತಿ ಚಟುವಟಿಕೆಗಳು, ಮಧ್ಯಾಹ್ನದ ಊಟ ಅಭ್ಯಾಸದ ಮೇಲ್ವಿಚಾರಣೆ, ಸಂಜೆ ಯೋಗ ಮತ್ತು ಆಟಗಳು, ರಾತ್ರಿ ಊಟ ಹಾಗೂ ರಾತ್ರಿ ಅಭ್ಯಾಸ ಹೀಗೆ ಪ್ರತಿಯೊಂದು ಕಾರ್ಯಕ್ರಮಗಳು ಸಮಯಕ್ಕೆ ಸರಿಯಾಗಿ ನಡೆಯುತ್ತಿದ್ದವು. ನಮ್ಮ ಗುರುಗಳು ನಮಗಿಂತಲೂ ಮುಂಚಿತವಾಗಿಯೆ ಎದ್ದು ನಮ್ಮ ಪ್ರತಿಯೊಂದು ಕಾರ್ಯಚಟುವಟಿಕೆಗಳಲ್ಲಿ ನಮಗೆ ಮಾರ್ಗದರ್ಶನ ನೀಡುತ್ತ, ನಮ್ಮ ನೆರಳಾಗಿ ಸದಾ ಕಾಲ ಇರುತ್ತಿದ್ದರು. ಅವರಿಗೆ ತಮ್ಮ ವೈಯಕ್ತಿಕ ಬದುಕಿನ ಪರಿವೆ ಇಲ್ಲವೇನೋ ಎಂಬಂತಿದ್ದರು. ನಮ್ಮ ಬದುಕಿನ ರುವಾರಿಗಳಾಗುವುದಕ್ಕೆ ಅವರ ತ್ಯಾಗದ ಬದುಕು ಕಾರಣವೆಂದರೆ ಅತಿಶಯೋಕ್ತಿಯಾಗುವುದಿಲ್ಲ.

9 ನೇ ತರಗತಿಗೆ ರಾಷ್ಟ್ರೀಯ ಭಾವೈಕ್ಯತೆಯನ್ನು ಉಂಟುಮಾಡುವ ಉದ್ದೇಶದಿಂದ ವಲಸೆ ಪದ್ಧತಿ ಇದ್ದು, ಇದರಲ್ಲಿ ಪ್ರತಿಶತ 20 ಮಕ್ಕಳು ನಮ್ಮ ವಿದ್ಯಾಲಯದಿಂದ ಜ.ನ.ವಿ ಫರೂಖಾಬಾದ ವಿದ್ಯಾಲಯಕ್ಕೆ ಹೋಗುತ್ತಿದ್ದರು ಹಾಗೂ ಅಲ್ಲಿಯ ಪ್ರತಿಶತ 20 ಮಕ್ಕಳು ನಮ್ಮ ವಿದ್ಯಾಲಯಕ್ಕೆ ಬರುತ್ತಿದ್ದರು. ಹಾಗೇ ಬಂದ ಮಕ್ಕಳಿಗೆ ಇಲ್ಲಿನ ಭಾಷೆ, ಆಹಾರ, ವಿಹಾರ ಪರಿಸರದ ಪರಿಚಯ ಮಾಡಿಸಿ ಅವರು ಇಲ್ಲಿ ಹೊಂದಿಕೊಳ್ಳುವಂತೆ ಮಾಡುವ ಗುರುತರವಾದ ಜವಾಬ್ದಾರಿಯು ನಮ್ಮ ಗುರುಗಳ ಮೇಲೆಯೇ ಇತ್ತು. ಅವರು ಆ ಕಾರ್ಯವನ್ನು ಅತ್ಯಂತ ಸಮರ್ಪಣಾ ಮನೋಭಾವದಿಂದ ಹಾಗೂ ಶ್ರದ್ಧೆಯಿಂದ ಮಾಡಿದ್ದರಿಂದ, ಆ ವಿದ್ಯಾರ್ಥಿಗಳು ಪ್ರಭಾವಿತರಾಗಿ ಎಷ್ಟೋ ಮಕ್ಕಳು ತಮ್ಮ ರಾಜ್ಯಕ್ಕೆ ಹಿಂದಿರುಗದೆ ಇಲ್ಲಿಯೇ ತಮ್ಮ ಅಭ್ಯಾಸವನ್ನು ಮುಂದುವರೆಸಿದ್ದೂ ಉಂಟು.

ನಮ್ಮ ವಿದ್ಯಾಲಯದಲ್ಲಿ ಬಾಲ್ಯಾವಸ್ಥೆಯ ಅಂಚಿನಲ್ಲಿರುವ, ಕಿಶೋರಾವಸ್ಥೆಯಲ್ಲಿರುವ ಹಾಗೂ ಪ್ರೌಢಾವಸ್ಥೆಯಲ್ಲಿರುವ ಹೀಗೆ ಮೂರು ರೀತಿಯ ವಯೋಮಾನದ ಮಕ್ಕಳು ಇರುತ್ತಿದ್ದರು. ಈ ಮೂವರನ್ನು ಒಂದೇ ತೆರನಾಗಿ ನಡೆಸಿಕೊಳ್ಳುವುದು ಸಾಧ್ಯವಿಲ್ಲ. 6 ರಿಂದ 10ನೇ ತರಗತಿಯ ಮಕ್ಕಳಿಗೆ ಶಿಕ್ಷಕ ಹಾಗೂ ಪೋಷಕರಾಗಿ ಹಾಗೂ 11 ಮತ್ತು 12 ನೇ ತರಗತಿ ವಿದ್ಯಾರ್ಥಿಗಳಿಗೆ ಸ್ನೇಹಿತರಂತೆ ಇದ್ದು, ಏಕಕಾಲದಲ್ಲಿ ಮೂರು ಪಾತ್ರಗಳನ್ನು ನಿರ್ವಹಿಸುವ ಸವಾಲು ಅವರ ಮುಂದೆ ನಿರಂತರವಾಗಿ ಇರುತ್ತಿತ್ತು. 'A Teacher is a friend, philosopher and a guide' ಎನ್ನುವಂತೆ ನಮಗೆ

ಪ್ರಾರಂಭದಲ್ಲಿ ಮಾರ್ಗದರ್ಶಕರಾಗಿ ನಂತರ ತತ್ವಜ್ಞಾನಿಗಳಾಗಿ ಕೊನೆಯಲ್ಲಿ ನಮಗೆ ಸ್ನೇಹಿತರಾಗಿ ಬದಲಾದ ನಮ್ಮ ಗುರುವರ್ಗವನ್ನು ಎಷ್ಟು ಹೊಗಳಿದರೂ ಕಮ್ಮಿಯೇ.

ಹದಿಹರೆಯದ ವಯಸ್ಸು ಯಾರಿಗಾದರೂ ಜೀವನದ ಮಹತ್ವದ ಘಟ್ಟ. ಈ ವಯಸ್ಸಿನಲ್ಲಿ ಅನೇಕ ರೀತಿಯ ದೈಹಿಕ ಮತ್ತು ಮಾನಸಿಕ ಬದಲಾವಣೆಗಳು ಸಂಭವಿಸುತ್ತವೆ. ನಮ್ಮ ಗುರುವೃಂದ ಆ ಸಮಯದಲ್ಲಿ ನಮಗೆ ಸೂಕ್ತ ಮಾರ್ಗದರ್ಶನ ನೀಡಿದರಲ್ಲದೆ, ಆ ಬದಲಾವಣೆಗೆ ವೈಜ್ಞಾನಿಕ ಕಾರಣಗಳನ್ನು ತರಗತಿ ಬೋಧನೆಗಳಲ್ಲಿ ತಿಳಿಸುವ ಮುಖಾಂತರ ನಮ್ಮಲ್ಲಿನ ಆತಂಕವನ್ನು ಕಡಿಮೆ ಮಾಡುತ್ತಿದ್ದರು. ಆ ಸಂದರ್ಭದಲ್ಲಿ ಹೆಚ್ಚು ಪೌಷ್ಟಿಕ ಆಹಾರದ ಅವಶ್ಯಕತೆ ಇದ್ದುದ್ದರಿಂದ ತಾವೇ ಒತ್ತಾಯಪೂರ್ವಕವಾಗಿ ನಮಗೆ ಊಟ ಬಡಿಸುತ್ತಿದ್ದರು ಅವರ ಜೊತೆಗೆ ವಿಶೇಷವಾಗಿ ವೈಯಕ್ತಿಕ ಶುಚಿತ್ವ ಕಾಯ್ದುಕೊಳ್ಳುವಲ್ಲಿ ಮಾರ್ಗದರ್ಶನ ನೀಡುತ್ತಿದ್ದರು. ನಾವು ನಮ್ಮ ತಂದೆ-ತಾಯಿಯರೊಂದಿಗೆ ಹಂಚಿಕೊಳ್ಳಲಾರದ ಎಷ್ಟೋ ವಿಷಯಗಳನ್ನು ಅವರೊಂದಿಗೆ ಹಂಚಿಕೊಂಡು ಸೂಕ್ತ ಮಾರ್ಗದರ್ಶನವನ್ನು ಪಡೆದೆವು. "ಗುರು ಬ್ರಹ್ಮ, ಗುರು ವಿಷ್ಣು, ಗುರುದೇವೊ ಮಹೇಶ್ವರಃ, ಗುರು ಸಾಕ್ಷಾತ ಪರಬ್ರಹ್ಮ ತಸ್ಮೈ ಶ್ರೀ ಗುರುವೇ ನಮಃ" ಎನ್ನುವ ಮಾತು ಇಲ್ಲಿ ಸಾರ್ವಕಾಲಿಕ ಸತ್ಯವಾಗಿ ಪರಿಣಮಿಸುತ್ತದೆ.

ನಮ್ಮಲ್ಲಿ ಪ್ರತಿಭೆಗಳಿಗೇನು ಕೊರತೆ ಇರಲಿಲ್ಲ. ಆದರೆ ಬಹಳಷ್ಟು ಪ್ರತಿಭೆಗಳು ಎಲೆಮರೆಯ ಕಾಯಿಯಂತೆ ಇರುತ್ತಿದ್ದವು. ವಿದ್ಯಾಲಯದಲ್ಲಿ ಪಠ್ಯ ಚಟುವಟಿಕೆಗಳಿಗೆ ಎಷ್ಟು ಮಹತ್ವ ಇರುತ್ತಿತ್ತೊ, ಅಷ್ಟೇ ಮಹತ್ವವನ್ನು ಸಹಪಠ್ಯ ಚಟುವಟಿಕೆಗಳಿಗೆ ಮತ್ತು ಆಟೋಟಗಳಿಗೆ ಕೊಡಲಾಗುತ್ತಿತ್ತು. ಪ್ರತಿಯೊಬ್ಬ ಶಿಕ್ಷಕರು ತಮ್ಮ ವಿಷಯಕ್ಕೆ ಸೀಮಿತರಾಗದೆ ಇನ್ನಿತರ ಸಹಪಠ್ಯ ಹಾಗೂ ಆಟೋಟಗಳಲ್ಲಿ ಆಸಕ್ತಿಯನ್ನು ತೋರಿಸುತ್ತಿದ್ದರು. ಅವರು ವೃತ್ತಿಯಿಂದ ಹಾಗೂ ಪ್ರವೃತ್ತಿಯಿಂದ ಶಿಕ್ಷಕರಾಗಿಯೆ ಕಾರ್ಯನಿರ್ವಹಿಸುವುದು ಅವರ ಮುಂದಿನ ಸವಾಲಾಗಿರುತ್ತಿತ್ತು. ಅವರ ಮಾರ್ಗದರ್ಶನದಲ್ಲಿ ನಾವು ಅನೇಕ ಬಹುಮಾನ ಹಾಗೂ ಪ್ರಶಸ್ತಿಗಳನ್ನು ಪಡೆದಿರುವುದು ಅಭಿಮಾನದ ಸಂಗತಿಯಾಗಿದೆ.

ಸರ್ವಜ್ಞ ಹೇಳುವಂತೆ ವಿದ್ಯೆ ಕಲಿಸದಾ ತಂದೆ, ಬುದ್ಧಿ ಹೇಳದ ಗುರು, ಬಿದ್ದಿರಲು ಬಂದು ನೋಡದ ತಾಯಿ ಶುದ್ಧ ವೈರಿಗಳು ಎನ್ನುವ ಮಾತಿನಂತೆ ನಮಗೆ ತಂದೆಯಾಗಿ ವಿದ್ಯೆಯನ್ನು ಕಲಿಸಿದ್ದಾರೆ. ಬುದ್ಧಿಯನ್ನು ಕೊಡುವ ಕೆಲಸವನ್ನು ಮಾಡಿದ್ದಾರೆ. ಆರೋಗ್ಯ ಸರಿ ಇಲ್ಲದಿರುವಾಗ ತಾಯಿಗಳಾಗಿ ನಮ್ಮನ್ನು ನೋಡಿಕೊಂಡಿದ್ದಾರೆ. ಈ ಪ್ರಪಂಚದಲ್ಲಿ ನಾವು ದೇವರನ್ನು ಪ್ರತ್ಯಕ್ಷವಾಗಿ ಕಾಣಲು ಸಾಧ್ಯವಿಲ್ಲ. ಆ ಪರಮಾತ್ಮನ ಸಾಕ್ಷಾತ್ಕಾರ ಸ್ವರೂಪವನ್ನು ಗುರುವಿನ ಪಾದದಲ್ಲಿ ಕಾಣುತ್ತೇವೆ. ನನ್ನ ನವೋದಯದ ಪ್ರತಿಯೊಬ್ಬ ಗುರುಗಳು ತಂದೆ-ತಾಯಿ-ಗುರು, ಈ ಮೂವರ ಪ್ರತಿರೂಪದ ಸಾಕಾರ ಮೂರ್ತಿಗಳಾಗಿದ್ದರು. ಅಂತೆಯೇ ನಮ್ಮ ಬದುಕು ಇಂದು ಉಜ್ವಲವಾಗದೆ. ಅವರ ತತ್ವಾದರ್ಶಗಳನ್ನು ಅವರ ಮೌಲಿಕ ವಿಚಾರಗಳನ್ನು ನಮ್ಮ ಬದುಕಿನಲ್ಲಿ ಅನುಷ್ಠಾನಗೊಳಿಸಿಕೊಳ್ಳುವುದೇ ನಮ್ಮ ಕರ್ತವ್ಯವಾಗಿದೆ. ಇಂದಿನ ನಮ್ಮ ಎಲ್ಲ ಗೌರವ, ಕೀರ್ತಿ, ಪ್ರಯತ್ನ, ಸಾಧನೆಗಳಿಗೆ ಅವರ ವ್ಯಕ್ತಿತ್ವದ ಪ್ರಭಾವಗಳೇ ಕಾರಣವಾಗಿದೆ. ಅಂತಹ ಸದ್ಗುರುಗಳನ್ನು ಪಡೆದ ನಾವು ನಿಜಕ್ಕೂ ಅದೃಷ್ಟವಂತರು. ಈ ಸಂದರ್ಭದಲ್ಲಿ ಆ ಎಲ್ಲ ಪೂಜ್ಯನೀಯರಿಗೆ ನನ್ನ ಈ ಲೇಖನಿಯ ಮೂಲಕ ಅಕ್ಷರ ನಮನಗಳನ್ನು ಸಲ್ಲಿಸಿ ಧನ್ಯತಾ ಭಾವದ ಜೊತೆಗೆ ಕೃತಜ್ಞತೆಯ ಪುಷ್ಪಗಳನ್ನು ಸಲ್ಲಿಸಿ ಕೃತಾರ್ಥಳಾಗುತ್ತೇನೆ.

ವಂದನೆಗಳು ನಿಮಗೆ ನಮ್ಮ ಕನಸುಗಳನ್ನು ಜೋಡಿಸಿ
ಅರಳಿಸಿದ್ದಕ್ಕಾಗಿ,
ನಮ್ಮ ಅರಿವನ್ನು ಹೆಚ್ಚಿಸಿದ್ದಕ್ಕಾಗಿ,
ನಮ್ಮ ಬೆಳೆವಣಿಗೆಯ ದಾರಿಯನ್ನು ತೋರಿಸಿದ್ದಕ್ಕಾಗಿ,
ನಮ್ಮ ಹಕ್ಕುಗಳನ್ನು ಗುರುತಿಸಿ, ಪ್ರತಿಪಾದಿಸಿದ್ದಕ್ಕಾಗಿ,
ನಮ್ಮನ್ನು ನೀವು ಅರ್ಥ ಮಾಡಿಕೊಂಡದ್ದಕ್ಕಾಗಿ,
ನಮ್ಮನು ನೀವು ರಕ್ಷಣೆ ಮಾಡಿದ್ದಕ್ಕಾಗಿ,
ನಮ್ಮ ಶಕ್ತಿಯನ್ನು ಗುರುತಿಸಿದ್ದಕ್ಕಾಗಿ, ವಂದನೆ-ಅಭಿನಂದನೆ.

ಶುಭಮಸ್ತು.

**-ವಿದ್ಯಾ ಹೂಗಾರ**

2ನೇ ಬ್ಯಾಚ್‌ನ ವಿದ್ಯಾ, ಸಧ್ಯ ಹಾವೇರಿಯಲ್ಲಿ ಶಿಕ್ಷಣ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದಾರೆ.

## ಮೋಡದಲ್ಲೆ ಹೊಸಕಿ ನಿಂದೆ

ಮೌನ ಪ್ರತಿಮೆ ದಿಬ್ಬಣ
ಕಾಲರೂಢಿ ಪ್ರಾಣನೀಡಿ
ಹರಿದು ಬಾರೆ ಅರೆಕ್ಷಣ

ಕಣ್ಣ ಅಂಚಿನಲ್ಲಿ ಮಿಂಚಿ
ಮರೆಯಲೇಕೆ ಅಡಗುವೆ
ನಿನ್ನ ಸ್ಪರ್ಶದಲ್ಲೇ ಜಗದ
ಸಿರಿಯ ನಲ್ಮೆ ತೋರಣ

ಬೆಳ್ಳಿಮರೆಯ ಕರಿಯ ತೆರೆಗೆ
ಕಾದ ಕಣ್ಣು ಹನಿದಿವೆ
ತಣಿಸು ನಮ್ಮ ಒಡಲನೊಮ್ಮೆ
ಮುತ್ತುದುರಿಸೇ ಹೂರಣ.

ಕಲ್ಪನೆಯ ಕವಿಯ ದನಿಗೆ
ಸುರಿವ ನಿನ್ನ ಕಾರಣ
ಒಲವ ಸೋನೆ ನವಿರ ನಲ್ಮೆ
ಉಣಿಸದಿರೇ ದಾರುಣ

– ವೀರೇಶ ಸಜ್ಜನ. 18ನೇ ಬ್ಯಾಚ್

# ನವೋದಯದಲ್ಲಿ "ಆದಿ'ಪರ್ವ

ನಮ್ಮನ್ನೆಲ್ಲ ನಮ್ಮ ಅಪ್ಪ-ಅಮ್ಮಂದಿರು ನವೋದಯ ವಿದ್ಯಾಲಯವೆಂಬ ರೆಸಿಡೆನ್ಸಿಯಲ್ ಸ್ಕೂಲಿನಲ್ಲಿ ಬಿಟ್ಟು ಹೋಗಿದ್ದರು. ಪ್ರತಿ ಜಿಲ್ಲೆಗೆ ೮೦ ಪ್ರತಿಭಾವಂತ ವಿದ್ಯಾರ್ಥಿಗಳನ್ನು ಪ್ರವೇಶ ಪರೀಕ್ಷೆಯ ಮುಖಾಂತರ ಆರಿಸಿ, ೧೨ನೆಯ ತರಗತಿವರೆಗೂ ನಮ್ಮ ಓದು-ವಸತಿಯ ಖರ್ಚನ್ನು ವಹಿಸಿಕೊಳ್ಳುತ್ತಾರೆ. ಕೇಂದ್ರ ಸರ್ಕಾರದ ಈಯೋಜನೆ ದಿವಂಗತ ರಾಜೀವ ಗಾಂಧಿಯವರು ಪ್ರಧಾನಿಯಾಗಿದ್ದಾಗ ಕಾರ್ಯ ರೂಪ ಪಡೆಯಿತು. ಪ್ರತಿ ಜಿಲ್ಲೆಗೊಂದರಂತೆ ಒಂದೊಂದು ನವೋದಯ ವಿದ್ಯಾಲಯಗಳು ದೇಶದಾದ್ಯಂತ ಪ್ರಾರಂಭಗೊಂಡವು. ಮುಖ್ಯವಾಗಿ ಗ್ರಾಮೀಣ ಪ್ರದೇಶಗಳಿಂದ ಬಂದ ವಿದ್ಯಾರ್ಥಿಗಳಿಗೆ ಸಹಾಯವಾಗಲೆಂದು ಇದರ ಉದ್ದೇಶ. ನನ್ನಂತೆ ಒಟ್ಟು ೮೦ ಜನ ಆ ವರ್ಷಕ್ಕಾಗಿ ಸೆಲೆಕ್ಟ್ ಆಗಿದ್ದರು. ನಮ್ಮನ್ನೆಲ್ಲಾ ನೋಡಿದರೆ ನಾವ್ಯಾರೂ ಗ್ರಾಮೀಣ ಪ್ರದೇಶದರಂತೆ ಕಾಣುತ್ತಿರಲಿಲ್ಲ. ಆ ರೀತಿಯಿತ್ತು ನಮ್ಮ ಮೇಕ್ ಅಪ್, ಒಳ್ಳೆ ಮದುವೆಗೆ ಹೊರಟವರಂತೆ ಅಲಂಕರಿಸಿಕೊಂಡು ವಿದ್ಯಾಲಯದಲ್ಲಿ ಅಡಿಯಿಟ್ಟಿದ್ದೆವು.

'ವಿದ್ಯಾ ಭವನ' ಧಾರವಾಡದ ಹೃದಯ ಭಾಗದಲ್ಲಿರುವ, ಶಿಕ್ಷಕರಿಗೆಂದು ಕಟ್ಟಿದ ಕಟ್ಟಡ. 'ವಿದ್ಯಾ ಭವನ' ತಕ್ಕುದಾದ ಹೆಸರು. ವಿದ್ಯೆಯ ಆರಾಧನೆ ನಡೆಯುತ್ತದೆಯೋ ಇಲ್ಲಿ? ಇರಬೇಕು, ಅದಕ್ಕಾಗಿಯೇ ಹಾಗಂತ ಹೆಸರಿಟ್ಟಿಲ್ಲವೇ? ಇಲ್ಲಿ ಒಂದು ಸಭಾಂಗಣದೊಂದಿಗೆ, ಸರಕಾರಿ ಶಿಕ್ಷಕರು ತಮ್ಮ ಡಿಪಾರ್ಟಮೆಂಟಲ್ ವರ್ಕ್ ಅಥವಾ ಇನ್ನಿತರ ಕೆಲಸಗಳ ನಿಮಿತ್ತ ಧಾರವಾಡಕ್ಕೆ ಬಂದಿದ್ದಲ್ಲಿ ಉಳಿದುಕೊಳ್ಳಲು ಒಂದಿಪ್ಪತ್ತು ರೂಮುಗಳಿದ್ದವು. ಈ ಉಗ್ರಾಣದಂತಹ ಸಭಾಂಗಣ ಮತ್ತು ಈ ರೂಮುಗಳು, ಇವೇ ನಮಗೆ ಟೆಂಪರರಿ ಉಳಿದುಕೊಳ್ಳಲು ಮಾಡಿದ ವ್ಯವಸ್ಥೆ.

ಉಗ್ರಾಣದಂತಿರುವ ಸಭಾಂಗಣದಲ್ಲಿ ಆಗಲೆ ನಮ್ಮ ಸೀನಿಯರ್ಸ್ ಅಂದರೆ ಏಳನೇ ಕ್ಲಾಸಿನ ವಿದ್ಯಾರ್ಥಿಗಳ, ವಸತಿಗೃಹವನ್ನಾಗಿ ಮಾಡಿದ್ದರು. ಮಲಗಲಿಕ್ಕಾಗಿ ಕಾಟುಗಳನ್ನು ಒಂದು ಸೈಡು ಸಾಲಾಗಿ ಜೋಡಿಸಿದ್ದರು. ಆ ಕಾಟುಗಳ ಮೇಲೆ ಅವರವರ ಟ್ರಂಕುಗಳು ವಿರಾಜಮಾನವಾಗಿದ್ದವು. ಸಭಾಂಗಣದ ಬಲ ಬದಿಗೆ ಏಳನೇ ತರಗತಿಯವರಾದರೆ, ಎಡ ಬದಿಗೆ ನಮಗೆ ವ್ಯವಸ್ಥೆ ಮಾಡಿದ್ದರು.

ನಮಗೆಲ್ಲ ವಿದ್ಯಾಲಯದಲ್ಲಿ ಜೀವನಕ್ಕೆ ಬೇಕಾದ ಅತ್ಯಾವಶ್ಯಕ ವಸ್ತುಗಳನ್ನು ವಿಲೇವಾರಿ ಮಾಡಿದರು. ಮುಖ್ಯವಾಗಿ ಒಂದು ಸ್ಟೀಲಿನ ತಟ್ಟೆ, ನೀರು ಕುಡಿಯಲು ಒಂದು ಗ್ಲಾಸ್ ಮತ್ತು ಮೊಸರು ಅಥವಾ ವಾರಕ್ಕೊಮ್ಮೆ ಕೊಡುವ ಸ್ವೀಟ್ ಹಾಕಿಸಿಕೊಳ್ಳಲು ಒಂದು ವಾಟೆ. ಇವು ಬರಿ ಊಟಕ್ಕೆ ಮಾತ್ರ ಉಪಯೋಗವಾಗದೇ, ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ಆಯುಧಗಳಾಗಿ ನಮಗೆ ಉಪಯೋಗವಾಗಿದ್ದುಂಟು. ಆ ಘಟನೆಗಳನ್ನು ನಂತರ ಹೇಳುವೆ. ನಮಗೆ ಒಂದು ಬ್ಲಾಂಕೆಟ್, ಒಂದು ಬೆಡ್ಡು, ಒಂದು ತಲೆದಿಂಬು ಮತ್ತೊಂದು ಬೆಡ್ ಶೀಟ್ ಕೊಟ್ಟು ನಮ್ಮ ಸರದಿ ಪ್ರಕಾರ ನಮಗೆ ದಕ್ಕಬಹುದಾದ ಕಾಟುಗಳನ್ನು ನಮ್ಮ ಗುರುಗಳು ತೋರಿಸಿ ಹೋಗಿದ್ದರು.

ಮೊದಲ ವಾರ ನಾವು ಮಾಡಿದ ಘನಂದಾರಿ ಕೆಲಸವೆಂದರೆ ನಮಗೆ ಕೊಟ್ಟ ಪ್ರತಿಯೊಂದು ವಸ್ತುವಿನ ಮೇಲೆ ನಮ್ಮ ಹೆಸರನ್ನು ಅಜರಾಮರವಾಗಿ ಉಳಿಯುವಂತೆ ಕೊರೆಯುವುದು. ಬೆಡ್ ಶೀಟ್‌ನ ಒಂದು ಮೂಲೆಯಲ್ಲಿ ನನ್ನ ಹೆಸರನ್ನು ಮತ್ತು ಅದರ ಜೊತೆಗೆ ನಾನಿರುವ ಕ್ಲಾಸಿನ ಹೆಸರನ್ನೂ ಅಚ್ಚುಕಟ್ಟಾಗಿ, ಬಾಲ್ ಪೆನ್ನಿನಿಂದ ಕೊರೆದೆ. ನನ್ನ ಗೆಳೆಯರು ಸಹ ತಮಗಿಷ್ಟ ಬಂದ ಜಾಗಗಳಲ್ಲಿ ತಮ್ಮ ಶಕ್ತಿಗನುಸಾರವಾಗಿ ತಮ್ಮ ಹೆಸರನ್ನು ಕೊರೆದರು. ನೋಡ ನೋಡುತ್ತಿದ್ದಂತೆ ನೋಟ್ ಬುಕ್, ಟೆಕ್ಸ್ಟ ಬುಕ್ಕು, ಬ್ಲಾಂಕೆಟ್, ಬೆಡ್ ಶೀಟ್,ಯುನಿಫಾರ್ಮ್ (ಕಾಲರಿನ ಒಳಭಾಗದಲ್ಲಿ ) ನಮಗೆ ಕೊಟ್ಟ ಚಪ್ಪಲಿಗಳಲ್ಲೂ ನಮ್ಮ ಹೆಸರುಗಳು ರಾರಾಜಿಸತೊಡಗಿದವು. ನಾಗೇಶ್‌ಯಲಿಗಾರ, ಜಗದೀಶ್ ದಂಡಿನ್, ಜಹೀರಾ ನದಾಫ್, ಕ್ರಿಶ್ನಾ ಮಿಸ್ಕಿನ್ ( ಕೆಲದಿನಗಳಲ್ಲಿ ಅದು ಕಿಶನ್ ಮಿಸ್ಕಿನ್ ಆಯಿತು), ಮಹೇಶ ಪತ್ರಿಮಠ, ರೇಣುಕಾ ಡೊಳ್ಳಿನ್... ಹೀಗೆ ನಮ್ಮ ಹೆಸರನ್ನು 'ರೋಷನ್' ಮಾಡುವ ವಸ್ತುಗಳು ಆವಾಗಾವಾಗ ಅಲ್ಲಲ್ಲಿ ಕಾಣಸಿಗತೊಡಗಿದವು. ಕೆಲವು ಬುದ್ಧಿವಂತರು ಕೋಡ್ ನೇಮ್ ಮಾತ್ರ ಬರೆದು ತೃಪ್ತಗೊಂಡರು. ಇದರಿಂದ ಕಳೆದ ವಸ್ತುಗಳ ಇಲ್ಲ ಸಿಕ್ಕ ವಸ್ತುಗಳ ಅಸಲಿ ಮಾಲೀಕರನ್ನು ಹುಡುಕುವುದು, ಹುಡುಕಿ ಕಾಯಿಸುವುದು, ಸಿಕ್ಕ ಮೇಲೆ ಅವರವರಿಗೆ ಅವರ ಅಮೂಲ್ಯವಾದ ವಸ್ತುಗಳನ್ನು (ವಿತ್ ದೆರ್ ನೇಮ್) ತಲುಪಿಸುವ ಸಾಮಾಜಿಕ ಜವಾಬ್ದಾರಿಯುಳ್ಳ ಕೆಲಸಗಳು ಹಗುರಾದವು.

ಮೊದಲ ವಾರದಲ್ಲಿ ನನಗೆ ವಿದ್ಯಾಲಯದ ವೇಳಾಪಟ್ಟಿಗೆ ಹೊಂದಿಕೊಳ್ಳುವುದೇ ಸಾಕಾಯಿತು. ನನಗಷ್ಟೇ ಅಲ್ಲ, ನನ್ನ ಎಲ್ಲ ಗೆಳೆಯರಿಗೂ. ಬೆಳಿಗ್ಗೆ ೫ ಘಂಟೆಗೆ ಸರಿಯಾಗಿ ಬೆಲ್ ಹೊಡೆಯುತ್ತಿದ್ದರು (ರಾತ್ರಿ ಪಾಳೆಗೆ ಬಂದ ವಾಚ್ಮನ್ನಗಳೇ ಬೆಳಿಗ್ಗೆ ಸರಿಯಾಗಿ ೫ ಘಂಟೆಗೆ ಬೆಲ್ ಹೊಡೆಯಬೇಕು). ಬೆಲ್ ಆಗುತ್ತಿದ್ದಂತೆ ನಮ್ಮೆಲ್ಲರ ಸವಿ ಮುಂಜಾವಿನ ಸವಿ ಕನಸು ನಾಶವಾಗಿತ್ತು. ಮುಂಜಾವಿನ ಮೌನದಲ್ಲಿ ಬೆಲ್ಲಿನ ಸದ್ದು ನಮ್ಮ ಕಿವಿಯ ತಮಟೆ ಹರಿದು ಹೋಗುವಂತೆ ಕೊರೆದು ಹೋಗುತ್ತಿತ್ತು. ಅದರ ಜೊತೆಗೆ ಅಲ್ಲೆ ಗೇಟಿನ ಹೊರಗೆ, ಬೀದಿಯಲ್ಲಿ ಮಲಗಿರುತ್ತಿದ್ದ ಕಂತ್ರಿ ನಾಯಿಗಳೂ ಸಹ ತಮ್ಮ ಕಂಠ ಬೆರೆಸಿ ಬೆಲ್ಲಿನ ಇಂಪಾದ ಸದ್ದಿಗೆ ಶೃತಿ ಬೆರೆಸುತ್ತಿದ್ದವು. ಈ ಶ್ವಾನ ಮತ್ತು ಬೆಲ್ಲಿನ ಜುಗಲಬಂದಿ ಕೆಲವೊಮ್ಮೆ ತಾರಕ್ಕೇರುತ್ತಿತ್ತು. ಇದಕ್ಕೆ ಕಾರಣವೂ ಇದೆ. ಕೆಲವೇ ಸೆಕೆಂಡ್ ಬೆಲ್ ಹೊಡೆದರೆ ಎದ್ದ ಹುಡುಗರು ಮತ್ತೆ ಮಲಗುವರೆಂದು ನಮ್ಮ ಪ್ರಾಂಶುಪಾಲರು ಸ್ಟ್ರಿಕ್ಟಾಗಿ ಐದು ನಿಮಿಷಗಳವರೆಗೆ ಬೆಲ್ ಹೊಡೆಯಬೇಕೆಂದು ವಾಚ್ ಮನ್‌ಗಳಿಗೆ ವಾರ್ನ್ ಮಾಡಿದ್ದರು. ಅದನ್ನು ಕಟ್ಟು ನಿಟ್ಟಾಗಿ ಪಾಲಿಸಲು ಇವರು ಐದು ನಿಮಿಷಗಳವರೆಗೆ ಅವರ ಕೈ ನೋಯಿಸುವವರೆಗೂ (?) ನಮ್ಮ ಕಿವಿ ತಮಟೆ ಹರಿಯುವವರೆಗೂ ಬೆಲ್ ಬಾರಿಸುತ್ತಲೇ ಇರುತ್ತಿದ್ದರು. ನಾವೇನೋ ವಿದ್ಯಾಲಯದಲ್ಲಿ ಮೂಕ ಪ್ರಾಣಿಗಳು; ಸುಮ್ಮನೆ ಎದ್ದು ಮುಖ ತೊಳೆಯಲು ಹೋಗುತ್ತಿದ್ದೆವು.

ಆದರೆ ಶ್ವಾನಗಳು ಬೆಲ್ ಹೊಡೆದು ಮುಗಿದ ಮೇಲೂ ಕೆಲ ಸಮಯದವರೆಗೂ ಕಿರುಚಿ ನಂತರ ಸುಮ್ಮನಾಗುತ್ತಿದ್ದವು.

ಮೊದಲ ವಾರದಲ್ಲಿ ನಾವೆಲ್ಲ ಚಾಚೂ ತಪ್ಪದೆ ಮಾಡಿದ ಕೆಲಸವೆಂದರೆ, ಗೋಳೋ ಅಂತ ಅಳುವುದು. ತಂದೆ–ತಾಯಿ–ಊರು–ಗೆಳೆಯರು ಹೀಗೆ ಎಲ್ಲವನ್ನೂ ತ್ಯಾಗ ಮಾಡಿ ಬಂದ ನಮಗೆ, ಒಂದೆರಡು ದಿನಗಳಲ್ಲಿ ವಿದ್ಯಾಲಯದ ಆಕರ್ಷಣೆ ಕಡಿಮೆಯಾಗಿ, ಧುತ್ತೆಂದು ಎಲ್ಲವೂ ನೆನಪು ಬರತೊಡಗಿ, ದುಃಖ ಇಮ್ಮಡಿಯಾಗಿ ಅಳು ಬರುತ್ತಿತ್ತು. ಕೆಲವೊಮ್ಮೆ ಏನೂ ನೆನಪು ಬರದಿದ್ದರೂ ಅಳುತ್ತಿದ್ದ ಬೇರೆಯವರನ್ನು ನೋಡಿ ಅಳಬೇಕೆನಿಸುತ್ತಿತ್ತು. ಏನೂ ತಪ್ಪು ಮಾಡದ ಮುಗ್ಧರನ್ನು ಜೈಲಲ್ಲಿ ಕೂಡಿ ಹಾಕಿದ ಹಾಗೆ ಅನ್ನಿಸುತ್ತಿತ್ತು. ಕೆಲವೇ ದಿವಸಗಳಲ್ಲಿ ನಾವು ವಿದ್ಯಾಲಯದ ವೇಳಾಪಟ್ಟಿಗೆ ಹೊಂದಿಕೊಂಡು ಅಳುವುದನ್ನು ಕಡಿಮೆ ಮಾಡಿದೆವು. ಇದೆ ನಮ್ಮ ಮೊದಲ ವಾರದ ಮೇಜರ್ ಅಚೀವ್ಮೆಂಟ್.

ಅಂತೂ ಬಂದೇ ಬಿಟ್ಟಿತು! ಹೌದು ಬಂದೇ ಬಿಟ್ಟಿತು! ಒಂದು ವಾರದಿಂದ ಕಾಯ್ದ ದಿನ 'ಫಸ್ಟ್ ಸಂಡೆ' ಕಡೆಗೂ ಬಂದೇ ಬಿಟ್ಟಿತು. ವಿದ್ಯಾಲಯದಲ್ಲಿ ಬಾಡಿ ಹೋದ ಹೂಗಳೆಲ್ಲ ಮತ್ತೆಂಗುರಿ ೩೬೦ ಡಿಗ್ರಿ ಅರಳಿದ್ದವು. ಅದೇನು ಸಂಭ್ರಮ; ಅದೇನು ಉಲ್ಲಾಸ; ಬೆಳಿಗ್ಗೆ ಬೇಗನೆ ಎದ್ದು ನೀಟಾಗಿ ಡ್ರೆಸ್ ಹಾಕಿಕೊಂಡು ಸಂಡೆ ಪ್ರೇಯರ್‌ಗೆ ಹಾಜರಾಗಿದ್ದೆವು. ಸಂಡೆ ಪ್ರೇಯರ್ ಅಂದರೆ ಅದು ಅಂತಿಥಾ ಪ್ರೇಯರ್ ಅಲ್ಲ; ಪ್ರೇಯರ್‌ಗಳ ಪ್ರೇಯರ್ ಅದು!

ನಮ್ಮ ಪ್ರೇಯರ್ ಹಾಲ್ ಅಂದರೆ, ನಾಲ್ಕೂ ಬಾಜು ಕ್ಲಾಸ್ ರೂಮ್ ಗಳಿಂದ ಆವೃತಗೊಂಡ ಚೌಕನೆಯ ಆಯತಟ್ಟಿನ ಭಾಗ. ಅಲ್ಲಿ ಸ್ವಲ್ಪ ಧ್ವನಿ ಬಂದರೂ ಸಾಕು, ಅದು ಸುತ್ತಲಿನಿಂದ ಪ್ರತಿಧ್ವನಿಗೊಂಡು ಸರೌಂಡ್ ಸೌಂಡಿನ ಸಿನೆಮಾ ಎಫೆಕ್ಟ್ ಬರುತ್ತಿತ್ತು. ಇನ್ನು ನೂರೈವತ್ತು ಉನ್ಮಾದಗೊಂಡ (ಹೌದು! ಫಸ್ಟ್ ಸಂಡೆ ನಾವೆಲ್ಲ ಪೇರೆಂಟ್ಸ್ ನೋಡುವ ಹುಚ್ಚಿನಲ್ಲಿ ಒಂದು ತರಹದ ಉನ್ಮಾದದಲ್ಲಿ ತೇಲಾಡುತ್ತಿದ್ದೆವು) ಹುಡುಗರು ಕಿರುಚುವ ಧ್ವನಿಯಲ್ಲಿ ಹಾಡಿದರೆಯಾವ ತರಹದ ಎಫೆಕ್ಟ್ ಬರಬಹುದೆಂದು ನೀವೇ ಊಹಿಸಿ. ಅಲ್ಲಿ ನಾವು ನಮ್ಮ ಶರೀರ ಉದ್ದದ ಪ್ರಕಾರ, ಬೇರೆ ಬೇರೆ ಡಿವಿಜನ್ ಗಳ ಪ್ರಕಾರ, ಬೇರೆ ಬೇರೆ ಲಿಂಗಗಳ ಪ್ರಕಾರ, ಮುಂದಿನಿಂದ–ಹಿಂದಿನಿಂದ–ಸೈಡಿನಿಂದ ನೋಡಿದರೆ ಸಾಲಾಗಿ ಕಾಣುವಂತೆ ನಿಂತಿರುತ್ತಿದ್ದೆವು. ಬೇರೆ ದಿನಗಳಾದರೆ ನಿಂತು ಪ್ರೇಯರ್ ಮುಗಿಸಿ ಸಾಲಾಗಿ ನಮ್ಮ ನಮ್ಮ ಕ್ಲಾಸುಗಳಿಗೆ ಹೋಗುತ್ತಿದ್ದೆವು. ಆದರೆ ಇಂದು ಸಂಡೆ. ಮಹಾ ಪ್ರೇಯರ್ ಆಗದೆ ಪೇರೆಂಟ್ಸ್ ನೋಡುವ ಹಾಗಿಲ್ಲ. ಪ್ರೇಯರ್ ಒಂದು ಸಾರಿ ಶುರುವಾದರೆ ಬೇಗ ಮುಗಿಯುವುದೂ ಇಲ್ಲ,ಯಾಕೆಂದರೆ ಇದು ಮೊದಲೇ ಹೇಳಿದಂತೆ ಪ್ರೇಯರ್‌ಗಳ ಪ್ರೇಯರ್; ಎಲ್ಲ ಧರ್ಮದ ಭಕ್ತಿ ಗೀತೆಗಳನ್ನು ಹಾಡಬೇಕು. ಅದರ ಜೊತೆಗೆ ದೇಶ ಭಕ್ತಿ ಗೀತೆಗಳನ್ನು ಹಾಡಬೇಕು, ಅದೂ ನಮ್ಮ ಮಾತೃ ಭಾಷೆಯಲ್ಲಿ ಮಾತ್ರವಲ್ಲ, ತೆಲಗು, ಅಸ್ಸಾಮಿ, ಮಲಯಾಳಂ ಹೀಗೆ ನಾನಾ ಭಾಷೆಯಲ್ಲಿ ಹಾಡಿ ನಮ್ಮ ಭಕ್ತಿ ಪ್ರದರ್ಶಿಸಬೇಕಿತ್ತು. ಅದಷ್ಟೇ ಅಲ್ಲ, ಕೆಲವೊಂದು ಪ್ರಾರ್ಥನೆಗಳಿಗೆ ವಿಶೇಷ ಆಸನಗಳನ್ನು ಹಾಕಿ ಕುಳಿತುಕೊಳ್ಳಬೇಕು. ಹಿಂದೂ ಪ್ರಾರ್ಥನೆಗಳಿದ್ದರೆ ಪದ್ಮಾಸನ, ಮುಸ್ಲಿಮದಾದರೆ ನಮಾಜ್ ಮಾಡುವಾಗ ಕುಳಿತುಕೊಳ್ಳುವ ಆಸನ, ಕ್ರೈಸ್ತ ದೇವರಾದರೆ ಮಂಡಿಯೂರಿ ಕುಳಿತುಕೊಂಡು ಪ್ರಾರ್ಥಿಸಬೇಕಿತ್ತು. ಫಸ್ಟ್ ಸಂಡೆಯ ಹುರುಪಿನಲ್ಲಿ ನನ್ನಂತೆಯೇ ಕೆಲವರು ಇನ್ನು ಮುಂದಿನ ಹಾಡು ಘೋಷಿಸುವ ಮುಂಚೆಯೇ ಆಯಾ ಆಸನ ಹಾಕಿ ಸಿದ್ಧರಾಗಿ ಕುಳಿತುಕೊಳ್ಳುತ್ತಿದ್ದೆವು. ಅರಚಿ–ಕಿರುಚಿ, ಅದಕ್ಕಾಗಿ ಬೈಸಿಕೊಂಡು, ಹಾಡುಗಳನ್ನು ಮತ್ತೆ ರಿಪೀಟ್ ಮಾಡಿ, ಅಂತೂ ಸಂಡೆ ಪ್ರೇಯರ್ ಮುಗಿಸಿದ್ದೆವು, ಇನ್ನು ಏನಿದ್ದರೂ ಈ ಆವಾಂತರ ಮುಂದಿನ ಸಂಡೆಯೆ, ಈಗ ಅಪ್ಪ – ಅಮ್ಮಂದಿರೊಂದಿಗೆ ನಲಿದಾಡುವ ಸಮಯ.

ಹೀಗೆ ಹಲವಾರು ಮರೆಯಲಾಗದ ಘಟನೆಗಳು ಮೊದಲವಾರದಲ್ಲಿ ನಡೆದವು. ಎಂದೂ ಮರೆಯಲಾಗದವಂತಹವು. ಈಗ ೨೫ ವರ್ಷಗಳ ನಂತರ ನೆನೆಸಿಕೊಂಡಾಗ, ಅಂದಿನ ಮೊದಲವಾರ ಅಥವಾ ನವೋದಯದ 'ಆದಿ' ಪರ್ವ ಎಂದೂ ಮರೆಯಲಾಗದ ಪರ್ವವಾಗಿ ಮನದಲ್ಲಿ ಉಳಿದಿದೆ. ಈಗ ಅದು ತಮಾಷೆಯಾಗಿ ಕಂಡರೂ, ಆಗ ನಾವುಗಳೆಲ್ಲ ಪಟ್ಟ ಪರಿಪಾಡುಗಳೆಲ್ಲ ನಮಗೆಲ್ಲ ಜೀವನದ ಮುಖ್ಯ ಪಾಠವನ್ನು ಕಲಿಸಿವೆ. ಆಗಿನ ನವೋದಯದ ಅಧ್ಯಾಪಕ ವೃಂದವು ನಮ್ಮನ್ನೆಲ್ಲ ಸಂಭಾಳಿಸಿ, ನಮಗೆಲ್ಲ ವಿದ್ಯಾಲಯದ ಮೇಲೆ ಪ್ರೀತಿ ಬರುವಂತೆ ಮಾಡಿದ್ದರ ಫಲವಾಗಿ, ಮುಂದೆ ವಿದ್ಯಾಲಯದ ವೇಳಾಪಟ್ಟಿಗೆ ಹೊಂದುಕೊಂಡು ಸ್ವಲ್ಪ ಸಮಯದಲ್ಲೇ ಒಂದು ಕುಂಟುಂಬದಂತೆ ಜೀವಿಸುವದಕ್ಕೆ ಸಾಧ್ಯವಾಯಿತು.



**ಆದರ್ಶ ಅರ್ಕಸಾಲಿ**

೨ನೇ ಬ್ಯಾಚಿನ ಆದರ್ಶ, ಕೇರಳದ ವಯನಾಡಿನಲ್ಲಿ ಕಣ್ಣಿನ ಆಸ್ಪತ್ರೆ ನಡೆಸುತ್ತಿದ್ದಾರೆ.

# Career Options in Medical Field

Medicine is one of the most sort out and rewarding career for those interested in science and dealing with sick people. Over the years, the field of medicine has undergone tremendous development. There is great scope for medicine as a career with varied options and new fields being added every year.

Health care is a vast field that encompasses a number of different types of career options and job sites. Depending on the career path and educational choices you decide upon, you may find yourself working for anywhere from a big hospital to a small clinic. These establishments are

- Hospitals and medical colleges
- Nursing homes & Clinics
- Diagnostic centers and laboratories
- Specialized health care services
- Pharma companies and medical shops
- Medical research

A doctor's profession involves a lot of hard work and at the same time it gives the satisfaction of curing patients, at times even saving lives. To be in this profession is more a responsibility than a privilege. It is more of what you can give the society than what you can get from it.

The demand for medical professionals is tremendously increasing with the unfortunate upsurge of diseases and ailments day by day. At the same time super specialty hospitals are mushrooming both in smaller and bigger cities offering employment opportunities. These along with liberalization of economy could bring better opportunities for the medical professionals in terms of remuneration, research and working facilities.

To enter into medical field as doctor you need to study 12th/PUC with biology. After successful 12th exams with good score you have to appear for common entrance test conducted by state/ central institutes. After the entrance examination according to your rank and choice you can opt for MBBS/BDS/Physiotherapy/ Alternative medicine. After finishing MBBS/BDS specializations, super specializations can be pursued after common entrance tests at each level. The major Specializations include General Medicine, General Surgery, Paediatrics, Obstetrics & Gynaecology, Dermatology, Radiology, Ophthalmology, Orthopedics, ENT, Psychiatry, Anesthesiology etc. The Super Specializations include Plastic Surgery, Neurosurgery, Cardio-thoracic surgery, urology, Paediatric Surgery, Gastroenterology, Endocrinology, neurology, Nephrology and Clinical Haematology. Dental medicine too has specializations.

Medical education is a lengthy course and continuous learning process. It takes 6 ½ years to complete MBBS degree and 3 years to do MD/MS. Another 3 years to finish DM/M.Ch if u plans to do super specialization At each level you have to appear for entrance tests facing tough competition from compatriots. Many a times results may be demoralizing and depressive. But self belief, hard work and persistence help in achieving your goal.

Academic fees and other expenses in a government medical college are cheaper and affordable by all. These fees are expensive in private colleges and poor and middle class may not afford.

There is option of switching into other fields from medicine after completion of MBBS/BDS/MD/MS. A person can enter into administrative service through IAS/IPS/KAS exams. There is scope for research in medicine in India and abroad. There are examples of medical graduates pursuing courses in IIT and IIM. One can serve in Indian defense service after completion of medical study. There are medical colleges run by Indian army, air force and navy offering medical degrees.

Other than Allopathy, medicine also covers different systems like Homeopathy, Ayurveda, Siddha, Unani etc. These systems of medicine do have considerable scope in medical practice. These practitioners can get employment as medical officer/doctor at government and private hospitals. One can also start his/ her own practice. He can also work as Professor in colleges or do research. Another option is to work as a research scientist for multinational companies with a minimum experience of 3 years in clinical research and laboratory research.

You don't have to be a doctor to work in medical field. If you are thinking about starting a career in healthcare other than doctor, you have many different training and employment opportunities available to you, in many different specialties. These include Nursing, Diagnostic Medical Sonographers, Dental Assistants, Healthcare Administrators, Medical Assistants, Lab Technicians, Medical Transcriptionists, Pharmacists and Surgical Technologists etc. These courses can be opted after completion of 12th class. All these specialties have good scope with decent salary.

It is right to take advantage of a career field that will not only provide you with ample professional opportunities, but that will also help you to make an impact to the society. Working in health care is rewarding on almost all levels: financially and emotionally. Make the right choice today by pursuing career in medical field.

**Dr Rajeev Dibbad**

Rajeev of 4th batc is currently working as Radiologist in Hubli



# ನವೋದಯನ್ನರು, ಜಾಗತಿಕ ಅರ್ಥವ್ಯವಸ್ಥೆ ಮತ್ತು ಪರಿಸರ ಸಂರಕ್ಷಣೆ



**ನೇಮಿಚಂದ್ರ ಹೊಂಬಣ್ಣವರ್**– 17ನೇ ಬ್ಯಾಚ್

ನಮ್ಮನ್ನು ನವೋದಯನ್ನರು ಎಂದು ಕರೆದುಕೊಳ್ಳಲು ತುಂಬಾ ಖುಷಿಯಾಗುತ್ತದೆ. ಪ್ರಸ್ತುತ ಸಮಾಜದಲ್ಲಿ, ನವೋದಯ ವಿದ್ಯಾಲಯಗಳಲ್ಲಿ ವ್ಯಾಸಂಗ ಮಾಡಿರುವ ಮತ್ತು ಮಾಡುತ್ತಿರುವವರ ಪೀಳಿಗೆಯೇ ಬೇರೆ ಎಂಬುದು ನನ್ನ ವಿಚಾರ. ನಾವು ನಮ್ಮ ನವೋದಯದ ಅಥವಾ ಬೇರೆ ನವೋದಯದವರು ಯಾರಾದರು ಸಿಕ್ಕರೆ ತುಂಬಾ ಸಂತಸ ವ್ಯಕ್ತಪಡಿಸುತ್ತೇವೆ ಹಾಗೂ ನಮ್ಮದೇ ಪರಿವಾರದವರಂತೆ ಅವರನ್ನು ಕಾಣುತ್ತೇವೆ. ಅದು ವರ್ಣಿಸಲಾಗದ ಒಂದು ಬಾಂಧವ್ಯ.

ಇರಲಿ, ಈಗ ನವೋದಯನ್ನರು ಮತ್ತು ಜಾಗತಿಕ ಅರ್ಥ ವ್ಯವಸ್ಥೆಯ ವಿಚಾರಕ್ಕೆ ಬರೋಣ. ನಿಮಗೆ ಅಚ್ಚರಿಯಾಗಿರಬಹುದು, ಇದೇನು ನವೋದಯನ್ನರು ಮತ್ತು ಜಾಗತಿಕ ಅರ್ಥ ವ್ಯವಸ್ಥೆಗೆ ಸಂಬಂಧ ಎಂದು. ನೀವಾಗಲೇ ಜಾಗತಿಕ ಅರ್ಥವ್ಯವಸ್ಥೆಗೆ ಸಂಬಂಧಿಸಿದ ಯಾವುದೋ ಉನ್ನತ ಸ್ಥಾನದಲ್ಲಿ ನವೋದಯದಲ್ಲಿ ಓದಿದವರು ಇರಬೇಕೆಂದುಕೊಂಡಿರಬೇಕು. ನಿಮ್ಮ ಕಲ್ಪನೆ ನಿಜವಾಗಿರಲಿ ಎಂದು ನಾನು ಆಶಿಸುತ್ತೇನೆ.

ನಾನು ನವೋದಯದಲ್ಲಿದ್ದಾಗ ಈ ವಿಚಾರವನ್ನು ಕೂಲಂಕುಷವಾಗಿ ಗಮನಿಸಿದ್ದೇನೆ – ಪಾಲಿಸಿಕೊಂಡು ಬಂದಿದ್ದೇನೆ. ನಾವು ಎಷ್ಟೋ ಸನ್ನಿವೇಶಗಳಲ್ಲಿ ನಮಗೆ ಬೇಕಾಗುವ ವಸ್ತುಗಳನ್ನು ಇಟ್ಟುಕೊಂಡಿರುತ್ತಿದ್ದಿಲ್ಲ. ಆದರೆ ಯಾವುದೇ ಕಷ್ಟವಿಲ್ಲದೆ ನಮ್ಮ ಕೆಲಸಗಳು ಸರಾಗವಾಗಿ ನಡೆಯುತ್ತಿದ್ದವು. ಗುಂಡು ಸೂಜಿ ಬೇಕಾದಾಗ ಠಜಿಜಿಛಿಜನಲ್ಲಿ ತಲೆಗೌಡರ್ ಸರ್ ಪೂರೈಸುತ್ತಿದ್ದರು. ಸದನದಲ್ಲಿರುವಾಗ ಬೇಕಾದರೆ, ಯಾರ ಹತ್ತಿರವಾದರೂ ಇದ್ದೇ ಇರುತ್ತದೆ ಎಂಬ ನಂಬಿಕೆ ಇರುತ್ತಿತ್ತು. ಹೀಗೆ, ಯಾವುದೇ ವಸ್ತುವಿನ ಕೊರತೆ ಬೀಳುತ್ತಿರಲಿಲ್ಲ. ಬರೀ stapler, ಗುಂಡು ಸೂಜಿ, A–4 ಪೇಪರ್ ಅಲ್ಲದೆ, ತಲೆಗೆ ಹಾಕಲು ಶಾಂಪೂ, ಕೆಂಪು ಮಸಿ ಬಾಲ್ ಪೆನ್ನು, ಇಂಕ್ ಪೆನ್ನಿಗೆ ಇಂಕು, ಹೀಗೆ ಎಲ್ಲವೂ ್ಚಿಡಿಜ ಆಗುತ್ತಿದ್ದವು. Stationary ವಸ್ತುಗಳಲ್ಲದೇ ಖಜಜಿಜಡಿಜಟಿಛಿಜ ಪುಸ್ತಕಗಳಂತು ಅತೀ ಹೆಚ್ಚಿಗೆ share ಆಗುತ್ತಿದ್ದುದು ನವೋದಯದಲ್ಲೇ ಅಂದುಕೊಳ್ಳುತ್ತೇನೆ. ಹೀಗೆ ಎಲ್ಲರ ಹತ್ತಿರ ಒಂದೊಂದು ವಸ್ತು ಇರುತ್ತಿತ್ತು.

ಮೇಲೆ ಪ್ರಸ್ತಾಪಿಸಿದ ಸನ್ನಿವೇಶಗಳು ನಿಮಗೆ ಅನ್ವಯಿಸಿರಬಹುದು ಕೆಲವೊಮ್ಮೆ ಅನ್ವಯಿಸಿರಲಿಕ್ಕಿಲ್ಲ. ಇರಲಿ, ಈಗ ಜಾಗತಿಕ ಅರ್ಥವ್ಯವಸ್ಥೆಗೆ ಬರೋಣ. ಅರ್ಥವ್ಯವಸ್ಥೆ ಮಾರುವುದು ಮತ್ತು ಕೊಳ್ಳುವುದರ ಮೇಲೆ ಅವಲಂಬಿತವಾಗಿದೆ. ಗ್ರಾಹಕ ಎಷ್ಟು ಜಾಸ್ತಿ ಕೊಳ್ಳುತ್ತಾನೆ ಹಾಗೂ ಕಂಪನಿಯವರು ಎಷ್ಟು ಮಾರುತ್ತಾರೆ ಎಂಬುದರ ಮೇಲೆ ಈ ಅರ್ಥವ್ಯವಸ್ಥೆ ನಡೆಯುತ್ತದೆ ಎಂದು ನಾನಂದುಕೊಂಡಿದ್ದೇನೆ.

ನಮ್ಮ ನವೋದಯನ್ನರಿಂದ ಈ ಕಂಪನಿಗಳಿಗೆ ಮತ್ತು ಅರ್ಥವ್ಯವಸ್ಥೆಗೆ ಸ್ವಲ್ಪ ಕಡಿಮೆ ಲಾಭ ಆಗುತ್ತದೆ – ಒಂದು ಸದನದಲ್ಲಿ ಎಲ್ಲರ ಹತ್ತಿರ stapler ಇರುವ ಬದಲು, ಒಬ್ಬನ ಹತ್ತಿರ ಇದ್ದರು ಸಾಕು. ನಾವೇನೂ ದಿನಾಲೂ _ ಕೊಡುವುದಿಲ್ಲ. ಒಬ್ಬನ ಹತ್ತಿರ ಪಂಚ್ ಇದ್ದರು ಕೆಲಸ ಆಗುತ್ತದೆ. ಬರಿ 12ನೇ ತರಗತಿಯ ವಿದ್ಯಾರ್ಥಿಗಳಲ್ಲಿ ಒಂದು ಸದನದಲ್ಲಿ ಒಂದು reference ಪುಸ್ತಕೆ ಇದ್ದರೆ ಉಳಿದವರೆಲ್ಲರೂ ಅದರ ಮೇಲೆ ಅವಲಂಬಿತರಾಗುತ್ತಾರೆ. ಇದನ್ನೇ ಇಡಿ ಭಾರತದಲ್ಲಿರುವ ನವೋದಯ ವಿದ್ಯಾಲಯಗಳ 12ನೇ ತರಗತಿ ವಿದ್ಯಾರ್ಥಿಗಳನ್ನು ಗಣನೆಗೆ ತೆಗೆದುಕೊಂಡರೆ 27000 ವಿದ್ಯಾರ್ಥಿಗಳಾಗುತ್ತಾರೆ. ಇವರಲ್ಲಿ 5000 ಜನ ಮಾತ್ರ ಡಿಜಜಿಜಡಿಜಟಿಛಿಜ ಪುಸ್ತಕೆ ಖರೀದಿ ಮಾಡಿದರೆ, ಉಳಿದ 22000 ವಿದ್ಯಾರ್ಥಿಗಳ ಮಾರ್ಕೆಟ್ ಇಲ್ಲದಂತಾಯ್ತು! ಇದು ಬರಿ reference ಪುಸ್ತಕದ ಮಾತಾಯ್ತು. ಬೇರೆ ಎಲ್ಲದನ್ನೂ ನೋಡುತ್ತಾ ಹೋದರೆ ಪಾಪ, ಕಂಪನಿಗಳ ಲಾಭಾಂಶ ಕಮ್ಮಿಯಾಗುತ್ತಾ ಹೋಗುತ್ತದೆ!!

ಅರ್ಥವ್ಯವಸ್ಥೆಯ ಮೇಲೆ ಋಣಾತ್ಮಕ ಅಂಶಗಳನ್ನು ಬಿಟ್ಟು ಈಗ ಪರಿಸರದ ಮೇಲೆ ನಮ್ಮ ಪ್ರಭಾವದ ಬಗ್ಗೆ ಯೋಚಿಸೋಣ. ಎಲ್ಲರೂ Stapler ತೆಗೆದುಕೊಂಡರೆ, ಅದರಿಂದ ಕಂಪನಿಗೆ ಲಾಭವಾಗುತ್ತದೆ – ಅವರು ಮತ್ತಷ್ಟು ಉತ್ಪನ್ನಗಳನ್ನು ಮಾರುಕಟ್ಟೆಗೆ ಬಿಡುಗಡೆ ಮಾಡುತ್ತಾರೆ – ಪರಿಸರದ ಮೇಲಿನ ಒತ್ತಡ ಇನ್ನಷ್ಟು ಹೆಚ್ಚುತ್ತದೆ. ಜಾಸ್ತಿ reference ಪುಸ್ತಕ ಕೊಂಡಷ್ಟು ಪ್ರಕಾಶಕರು ಹೆಚ್ಚಿಗೆ ಪ್ರತಿಗಳನ್ನು ಮುದ್ರಿಸುತ್ತಾರೆ – ಕಾಗದ ಜಾಸ್ತಿ ಬೇಕಾಗುತ್ತದೆ – ಪರಿಸರ ನಾಶ. ಹೀಗೆ A 4 ಕಾಗದ, ಗುಂಡು ಸೂಜಿ, Punch, ಪುಸ್ತಕಗಳು ಇತ್ಯಾದಿ ಜಾಸ್ತಿ ಖರೀದಿಸುವುದರಿಂದ, ಪರಿಸರದ ಮೇಲೆ ಒತ್ತಡ ಹೆಚ್ಚಾಗುತ್ತಾ ಹೋಗುತ್ತದೆ. ಇದ್ದ ವಸ್ತುಗಳನ್ನೇ ಹೆಚ್ಚು ಉಪಯೋಗಿಸುವುದು ಮತ್ತು ಆದಷ್ಟು ಕಡಿಮೆ ಸಂಪನ್ಮೂಲಗಳನ್ನು ಬಳಸುವುದರಿಂದ ಪರಿಸರದ ಮೇಲಿನ ಒತ್ತಡ ಕಮ್ಮಿಯಾಗುತ್ತಾ ಹೋಗುತ್ತದೆ. ಸ್ಕೆಚ್ ಪೆನ್ ಅನವಶ್ಯಕವಾಗಿ ಉಪಯೋಗಿಸುತ್ತಿದ್ದಿಲ್ಲ. ಇದೊಂಥರ ಡಿಜಜಣಛಿಜ ಛಿಠಟಿಛಿಜಠಿಣ.

ನಾವು ನಮ್ಮದೇ ಆದ ರೀತಿಯಲ್ಲಿ ಕೆಲವೊಮ್ಮೆ ನಮಗೇ ಗೊತ್ತಾಗದ ರೀತಿಯಲ್ಲಿ ಪರಿಸರ ಸಂರಕ್ಷಣೆ ಮಾಡುತ್ತಿದ್ದೆವು. ಉದಾಹರಣೆಗೆ, ನಾವು ಉಪಯೋಗಿಸುವ ಣಜಥಣ ಛಿಠಠಞಗಳು ಒಂದು ತರಗತಿಯಿಂದ ಇನ್ನೊಂದು ತರಗತಿಗೆ ವರ್ಗಾಯಿಸಲ್ಪಡುತ್ತವೆ. ಇದರಿಂದ ವಿದ್ಯಾಲಯದ ಬಜೆಟ್‌ನಲ್ಲೂ ಉಳಿತಾಯವಾಗುತ್ತದೆ, ಅಷ್ಟೇ ಕಾಳಜಿಯಿಂದ ಪರಿಸರದ ಮೇಲೆ

ಒತ್ತಡ ಕಡಿಮೆಯಾಗುತ್ತದೆ.

ನೀರಿನ ವಿಚಾರದಲ್ಲೂ ಹಾಗೆಯೇ, ಸುಮ್ಮನೆ ನೀರು ಪೋಲು ಮಾಡುತ್ತಿರಲಿಲ್ಲ, ಹಾಗೂ ನಮ್ಮ ಪ್ರಾಧ್ಯಾಪಕರು ಸಹ ಇದರ ಬಗ್ಗೆ ನಮಗೆ ಹೇಳುತ್ತಿದ್ದರು. ಹಿಂದೆ ವಿದ್ಯಾಲಯ ವಿದ್ಯಾಭವನದಲ್ಲಿದ್ದಾಗ 500 ಜನರಿಗೆ ಬರೀ ಎಂಟು ಟಾಯ್ಲೆಟ್ಟಳಿದ್ದವಂತೆ! ಅರ್ಧ ಬಕೇಟು ನೀರಿನಲ್ಲಿ ಸ್ನಾನ, ಅರ್ಧ ಮಗ್ಗು ನೀರಿನಲ್ಲಿ ಶೌಚ ಮುಗಿಸುವ ಕಲೆ ನವೋದಯನ್ನರಿಗೆ ಕರಗತವಾಗಿತ್ತಂತೆ . ಈಗ ಪರಿಸ್ಥಿತಿ ಒಂಚೂರು ಸುಧಾರಿಸಿ ಹುಡುಗರ ಸದನಗಳಲ್ಲಿ 18–20 ಜನರಿಗೆ, 2 ಟಾಯ್ಲೆಟ್ಗಳು ಮತ್ತು ಬಾತ್ ರೂಮಗಳಿವೆ.

'ಮಿತದಲ್ಲಿ ಹಿತ' ಸಾಧಿಸುವ ಈ ನವೋದಯ ಬುದ್ಧಿಯನ್ನು ಬೆಳೆಸಿಕೊಂಡಿದ್ದರಿಂದಲೇ ನಮ್ಮ ಜಾಣ ನವೋದಯ ವಿದ್ಯಾರ್ಥಿಗಳು ಪರಿಸರ ಸಂರಕ್ಷಣೆಯಲ್ಲಿ ತಮ್ಮ ಅಳಿಲು ಸೇವೆ ಸಲ್ಲಿಸುತ್ತಿದ್ದಾರೆ.

**ಕನ್ನಡ ತಾಯಿಯ ಎಂಟು ಮಕ್ಕಳು**

ಜ್ಞಾನಪೀಠವ ಪಡೆದವರ
ನಾನು ಬಲ್ಲೇನ!
ಕನ್ನಡತಾಯಿಯ ಎಂಟು
ಮಕ್ಕಳು ಇವರೇ ಅಲ್ಲೇನ!

ಕನ್ನಡ ಕಂಪು ಹರಡಿಸಿದಂತಹ
ಕುವೆಂಪು ಅಲ್ಲೇನ!
ಪದಗಳ ಅರಿತೋವು
ಬೇಂದ್ರೆ ಅಲ್ಲೇನ!

ಕನ್ನಡ ಆಸ್ತಿ ಅಂತ ಮೆರೆದ
ಮಾಸ್ತಿ ಅಲ್ಲೇನ!
ಕಡಲ ತೀರದ ಭಾರ್ಗವ
ಎನಿಸಿದ ಕಾರಂತ ಅಲ್ಲೇನ!

ಕನ್ನಡಕ್ಕಾಗಿ ಸೇವೆಯ ಸಲ್ಲಿಸಿದ
ಗೋಕಾಕ ಅಲ್ಲೇನ!
ಕನ್ನಡಕ್ಕಾಗಿ ಕೀರ್ತಿ ಗಳಿಸಿದ
ಮೂರ್ತಿ ಅಲ್ಲೇನ!

ನಾಟಕರಂಗಕೆ ರಂಗನು ತಂದ
ಕಾರ್ನಾಡ ಅಲ್ಲೇನ!
ಸಮಗ್ರ ಸಾಹಿತ್ಯಕ್ಕೆ ಸೇವೆಯ
ಸಲ್ಲಿಸಿದ ಕಂಬಾರ ಅಲ್ಲೇನ!

ಕನ್ನಡ ತಾಯಿಯ ಎಂಟು
ಮಕ್ಕಳು ಇವರೇ ಅಲ್ಲೇನ!

**– ವಿದ್ಯಾ ವಿ ಜ್ಯೋತಿ**
**8 'ಅ'**

**ಬೆಳಕು ಇದ್ದದ್ದೆಲ್ಲಿ?**

ದೀಪ ಹೊತ್ತಿಸುವ ಮುನ್ನ
ಬೆಳಕು ಇದ್ದದ್ದೆಲ್ಲಿ?
ಗೀರಿದ ಕಡ್ಡಿಯಲ್ಲೋ?
ನೆನೆದ ಬತ್ತಿಯಲ್ಲೋ?
ಹೊತ್ತಿಸಿದ ಕೈಗಳಲ್ಲೋ?
ಹೊಳೆದ ಕಂಗಳಲ್ಲೋ?
ಓಡಿದ ಕತ್ತಲೆಯಲ್ಲೋ?
ಕಂಡವರಾರು? ಕಂಡಿದ್ದರೆ ಕಡ್ಡಿ
ಗೀರುವವರಾರು?

**–ಮಹೇಶ್ವರ ಮಠದ**

# Educational Opportunities and Career options in Agricultural and allied fields

• Manjunath Hongal ( Batch#2),
• Shivanand Kammar(Batch #3)
• Chandrayya Hiremath (Batch#2)

Agriculture being the cradle of civilizations has remained the backbone of humanity. Any amount and rate of progress in any other field should be based on the solid foundation called agriculture. As the population is burgeoning with speedier economic developments, with its side effects is posing a greater challenge to the carrying capacity of mother earth in general and agriculture in particular. There is an urgent need to increase the productivity of agricultural enterprises with sustainability, achieving food security, nutritional security etc. Thus, there is a need for the young blood to innovate, re-energize and promote the developmental efforts carried out by the public, private organizations at the national or international level as either researcher or educationist or extension personnel or change agent.

In India, Indian Council of Agricultural Research is primarily responsible for carrying out basic and applied research and education in the field of agriculture through the network of its institutes and State Agricultural Universities spread all over the country. The education in the field of agriculture is structured in 4+2+3 years(B Sc., M Sc., Ph.D) fashion. Agriculture and allied fields like Horticulture, Forestry, Veterinary and Animal Husbandry, Agricultural Marketing, Sericulture, Home Science etc. are offered for Bachelors degree programme. For Masters and Doctors, Agronomy, Soil Science, Agricultural Chemistry, Agricultural Pathology, Agricultural Entomology, Agricultural Economics, Agricultural Extension, Genetics and Plant Breeding, Plant Physiology, Plant Biotechnology, Seed Science and Technology, Horticulture, Veterinary etc. courses are offered.

After completing the +2 with science stream, there exists number of educational opportunities and later career options in agriculture and allied fields. Some of which are mentioned below:

### *Education*

- Can get appointed as Assistant Professors by State Agricultural Universities
- Can get appointed as trainer/Human Resource specialist by private companies
- Can educate up to the level of Ph.D (in India or abroad) and obtain Post Doctoral Fellowship from within India or abroad institutes
- Can seek career in MBA from some of the institutes like IIM/ IRMA/MANAGE/VAMCOM etc.

### Research

- Can work as scientist with ICAR/ CSIR/ DRDO/ ICFRE/ ICMR/ DST/ DBT/ ISRO/ CCMB/ IIFT and other national dealing with agriculture
- Can work as scientist/ researcher with state agricultural universities
- Can work with numerous private agencies/organizations dealing in agricultural inputs (seeds, fertilizer, bio-fertilizer, agro-chemicals etc.)
- Can work as a researcher in renowned organizations in the field of frontier technologies such as biotechnology, nanotechnology, biophysics, etc.
- Can work with World Bank, FAO and other international developmental organizations

### *Extension and allied activities*

- Appointment in LINE departments like Department of Agriculture, Department of Horticulture, Department of Animal husbandry, Department of Forestry, Department of Agricultural Marketing, Department of Co-operation, Department of Sericulture etc. as Extension/Development Officers
- Appointment in K.rishi Vigyan Kendras as Subject Matter Specialists
- Appointment by private agencies / organizations dealing in agricultural inputs and products as production, marketing, R & D executives
- Appointment in semi-governmental organizations like –KRISCO,IFFCO KOF etc.
- Appointment in Nationalized or Rural or Private Banks as Rural Developmental Officers, Agricultural Extension Officers or Probationary officers
- Appointment in Insurance companies dealing with agricultural products
- Appointment by Non Governmental Organizations (NGOs) as Social Developmental workers.
- With the coming of WTO and multi-lateral agreements there are ample opportunities in trade related actives with Government, private and international organizations.

### *Self employment opportunities / Entrepreneurs*

- Agri-preneurs
- Agro Industries
- Agro chemicals
- Seed production
- Agro-Processing
- Bio control
- Biotechnology

### Competitive Exams

- ICAR/ARS/SRF/JRF
- All India Civil Services
- Central Civil Services & State Civil Services
- Banking & Insurance

## ದಿಲ್ ಢೂಂಡತಾ ಹೈ..

ಗುಲಮೊಹರ್ ಎಂಬ ಕೆಂಪು ಹೂವಿನ ಸುಂದರಿಯನ್ನು ನೋಡಿದರೆ ತಡ ನನ್ನ ಮನಸ್ಸು ಓಡಿ ಹೋಗಿ ನಿಲ್ಲುವುದು ನವೋದಯದ ಮೆಸ್ಸು ಹಾಗೂ ಗ್ರೌಂಡಿನ ಮುಂದೆಯೇ.. ಗುಲಮೊಹರ್ ಬಗ್ಗೆ ಎಲ್ಲಾದರೂ ಓದಿದರೂ ಅದೇ ನೆನಪೇ. ನವೋದಯ ನಮ್ಮೆಲ್ಲರ ಜೀವನದ ಒಂದು ಭಾಗ. ನನ್ನ ಪ್ರೀತಿಯ ಕವಿ ಗುಲ್ಜಾರ್ "ಮೈನೆ ತೇರೆ ಲಿಯೆ ಹಿ ಸಾತ್ ರಂಗ ಕೆ ಸಪ್ನೆ ಚುನೆ" ಎಂದು ಹೇಳುವಾಗ ನವೋದಯ ನನಗೆ ತಾನು ಕೊಟ್ಟ ಏಳು ವರ್ಷಗಳ ಬಗ್ಗೆ ಹೇಳಿದ ಹಾಗಾಗುತ್ತೆ. ಹೇಗೆ ಕಳೆದೆವೋ ಏಳು ವರ್ಷ, ಗೆಳೆಯರು ಸಿಕ್ಕರು, ಅಣ್ಣ-ತಮ್ಮ, ಅಕ್ಕ-ತಂಗಿಯರು ಕೂಡ.

ತಿಂದ ಕವಳಿ ಹಣ್ಣು, ಕದ್ದ ಮಾವು, ಹಲಸು ಈಗಲೂ ನೆನಪಿದೆ. ದುಡ್ಡು ಕೊಟ್ಟು ತಿಂದರೂ ಆ ರುಚಿ ಈಗ ಬರುವದಿಲ್ಲ, ಆ ಸಾಹಸಗಳಲ್ಲೇ ಆ ಖುಷಿ ಇತ್ತೋ ಏನೋ? ರವಿವಾರ ಮಧ್ಯಾಹ್ನಗಳು ಮಿಶ್ರಾ ಪೇಡಾಗೆ ರಿಜರ್ವ್ಡ್. ತಂದ ಸ್ವೀಟುಗಳಲ್ಲಿ ಅರ್ಧ ಪಾಲು ಸೀನಿಯರ್ ಗಳಿಗೆ, ಇಲ್ಲವಾದರೆ ಟೀಚರ್ಸಗೆ ಹೇಳುತ್ತೇವೆಂಬ ಧಮಕಿ ಬೇರೆ !! ಮುಂಜಾನೆ ಎದ್ದು ಎದ್ದು ಪಿ.ಟಿಗೆ ಹೋಗುವುದು ಎಷ್ಟು ಕಿರಿಕಿರಿಯೋ ಅದಕ್ಕಿಂತ ಹೆಚ್ಚಿನ ಖುಷಿ ಸಾಯಂಕಾಲ ಆಟದಲ್ಲಿ ಇರುತ್ತಿತ್ತು. ಕ್ರಿಕೆಟ್, ಫುಟ್ಬಾಲ್, ವಾಲಿಬಾಲ್, ಲಗೋರಿ- ಹೀಗೆ ಆಡಿದ ಆಟ. ಇನ್ನು ಟೀಚರ್ಸ್ ಕಡೆ ಬೈಸಿಕೊಂಡಿದ್ದಕ್ಕೆ, ಹೊಡೆಸಿಕೊಂಡಿದ್ದಕ್ಕೆ ಲೆಕ್ಕ ಇಟ್ಟವರಾರು? ಆದರೆ ಅದೆಲ್ಲಾ ನೆನೆಸಿಕೊಂಡರೆ ಖುಷಿಯಾಗುತ್ತೆ. ಒಳ್ಳೊಳ್ಳೆ ಟೀಚರ್ಸ್ ಸಿಕ್ಕರು, ಎಲ್ಲರಿಂದ ಸಾಕಷ್ಟು ಕಲಿತದ್ದಿದೆ.

ಬೇಂದ್ರೆಯನ್ನು ಪ್ರೀತಿಸಲು ಕಾರಣ ಮೇತ್ರಿ ಸರ್, ಹಿಂದಿಯನ್ನು ಇಷ್ಟಪಡಲು ಕಾರಣ ಮೂರ್ತಿ ಸರ್ ಮತ್ತು ರಮಾ ಮೇಡಂ , ಮ್ಯಾಥ್ಸ್ ಉತ್ತರ ಬರುವ ಹಾಗೆ ಮಾಡಿದ್ದು ಅಶೋಕ್ ಸರ್ (ಜಿಗುಟಿಸಿಕೊಂಡ ತಕ್ಷಣ ಉತ್ತರ ಬಂದು ಬಿಡುತ್ತಿತ್ತು!!), ಬಯಾಲಜಿ ಇಂಟರೆಸ್ಟ್ ಬರುವ ಹಾಗೆ ಮಾಡಿದ್ದು ಶರ್ಮ ಸರ್, ಈಗಲೂ ನಾನು ಓ ಹೆನ್ರಿ ಓದುವಾಗ ಎಸ್.ಟಿ.ಮೇತ್ರಿ ಸರ್ ಕ್ಲಾಸ್ ನೆನಪಾಗುತ್ತವೆ. ಎಲ್ಲವನ್ನು ಎಷ್ಟೊಂದು ತೀವ್ರವಾಗಿ ಪ್ರೀತ್ಸಿದ್ದೆವಲ್ಲ- ಆಟ, ಊಟ ಹಾಗೂ ಜಗಳಗಳನ್ನು ಕೂಡ.

ಈಗ ಜೀವನದ ಸೆಳೆತಕ್ಕೆ ಸಿಕ್ಕು ಎಲ್ಲೆಲ್ಲೋ ಹೋಗಿ ಬಿದ್ದೆವು. ನಮ್ಮನ್ನು ಬೆಳೆಸಿದ ನವೋದಯ ತಾನು ಮಾತ್ರ ಅಲ್ಲೇ ಗಟ್ಟಿಯಾಗಿ ಉಳಿದು ಬಿಟ್ಟಿದೆ, ಸ್ಥಿತಪ್ರಜ್ಞನ ಹಾಗೆ. ಎದ್ದು ಹೋದ ಯಾತ್ರಿಗಳನ್ನು ಕಳಿಸಿ ಮುಂದೆ ಬರುವ ಯಾತ್ರಿಗಳಿಗೆ ನೆರಳು ಕೊಡುವ ಆಲದ ಮರದಂತೆ. ಎದ್ದೆನೋ ಬಂದೆವು ಮನಸ್ಸು ಮಾತ್ರ ಅಲ್ಲಿಯೇ ಉಳಿದಿದೆ. ಕವಳಿ, ಮಾವು ಇನ್ನ್ಯಾರದೋ ಜೇಬಿನಲ್ಲಿದೆ, ಮಿಶ್ರಾಗೆ ಮತ್ತ್ಯಾರೋ ಬೇಲಿ ಹಾರುತ್ತಾರೆ, ಫುಟ್ಬಾಲ್ ಇನ್ನೊಬ್ಬರ ಕಾಲಿನ ಒದೆತ ತಿನ್ನುತ್ತಿದೆ, ಮತ್ತ್ಯಾರೋ ಸಹನಾವವತು ಹೇಳುತ್ತಾರೆ. ಒಟ್ಟಿನಲ್ಲಿ ನವೋದಯ ಚಿರಯವ್ವನೆ-ಅದೇ ಗುಲಮೊಹರ್ ಕೆಂಪು ಹೂವಿನೊಂದಿಗೆ. ಶಾಯದ್ ನಮಗಷ್ಟೇ ವಯಸ್ಸಾಗುತ್ತೇನೋ?

ಗುಲ್ಜಾರ್'ನ "ದಿಲ್ ಢೂಂಡತಾ ಹೈ, ಫ಼ಿರ್ ವಹಿ ಫ಼ುರ್ಸತ್ ಕೆ ರಾತ್ ದಿನ್" ನವೋದಯದ ಫ಼ುರ್ಸತ್ ಕೆ ರಾತ್ ದಿನ್ ನೆನಪಾಗಿ ಬರುತ್ತದೆ. ಕಣ್ಣಿನಲಿ ಸಣ್ಣ ನೀರ ಪೊರೆ. "ಮುಝ್ಕೊ ಲೌಟಾದೊ ಮೇರೆ ಬಚಪನ್"

ಹಮ್ ನವಯುಗ ಕಿ...

**- ಅರುಣ್ ಪಾಗಾದ**

## The hunt is sweeter than the kill

Come on think,

I want you to reach back into your minds and tell me, 'whats is that you fantasize about?' world peace? Do you fantasize about international fame? Do you fantasize about winning a Pulitzer Prize? Or a Nobel Price? An MTV Music Award? Do you fantasize about meeting some genius hunk, ostensibly bad but secretly simmering with noble passion and willing to sleep on wet spot?

Fantasies have to be unrealistic because the moment... the second... that you get what you seek, you don't, want it anymore. In order to continue to exist, desire must have its objects perceptually absent. It's not the 'it' that you want, its the passion of 'it'. So, desire supports crazy fantasies, this is what I mean, when I say that, we are only truly happy when day dreaming about future happiness. Or I say hunt is sweeter than the kill. Be careful what you wish for, not because you will get it but because you're doomed not to want it once you do.

So my lesson is, living by our wants will never make us happy. What it means to be fully human is to strive to live by ideas and ideals and not to measure our life by what we are attained in terms of our desires but those, small moments or integrity, compassion, rationality, even self scarifies. Because in the end, the only way that we can measure the significance of our lives is by valuing the lives of others.

ಮನುಷ್ಯ ಸದಾ ಯುದ್ಧಮಾಡುವ ತಯಾರಿಯಲ್ಲಿರಬೇಕು, ಹೆಚ್ಚೆಂದರೆ ಯುದ್ಧಮಾಡಬೇಕು ಆದರೆ ಏನನ್ನೂ ಗೆದಿಯಬಾರದು. ಗೆದಿಯಬೇಕೆಂಬ ಹಂಬಲದ ಮುಂದೆ, ಗೆಲುವು ನೀರಸವೇನಿಸುತ್ತದೆ.

**- Maheshwar Mathad**

### ನೆನಪಿನ ವರ್ಷಧಾರೆ

ಜೊತೆ ಒಡನಾಡಿದ
ಆ ಕ್ಷಣಗಳು, ದಿನಗಳು
ಅಂದಿನ ಖುಷಿಯ ಕೇಕೆಗಳು
ಸಂತಸದ ಕುಣಿತಗಳು
ಎಲ್ಲವೂ ಆ ಭಾವೋನ್ಮಾದದ ಬಿಸಿಗೆ ಆವಿಯಾಗಿ,
ಅರಿವಿಗೆ ಬಾರದೇ ಕಾಲಗರ್ಭದಲ್ಲಿ ಸೇರಿಹೋದವು.
ಕಾಲ ದೇಶಗಳು ನಮ್ಮನು ದೂರ ಮಾಡಿದವು.
ಹೊಟ್ಟೆ ಹೊರೆಯಲು ನಾವೇ ದೂರಾದೆವು.
ಅಂದು ಆವಿಯಾದ ಆ ಕ್ಷಣಗಳು
ಘನೀಭವಿಸಿ ಮೋಡಗಳಾಗಿ
ತೇಲುತಿಹವು ಮನದಾಗಸದಲಿ.ಕಾರು
ಮೋಡಗಳಂತಲ್ಲ ಇವು,
ಋತು-ಕಾಲಗಳ ಹಂಗಿಲ್ಲದವು.
ಒಂಟಿತನ ಕಾದಿದಗೆಲ್ಲ,
ಮರಳುಭೂಮಿಯಂತ ಬಾಳಲಿ
ಆ ನೆನಪುಗಳ ವರ್ಷಧಾರೆ
ಒಮ್ಮೊಮ್ಮೆ ನಗೆಯ ತುಂತುರು
ಮಗದೊಮ್ಮೆ ಕಣ್ಣಂಚಲಿ ಜಿನುಗು.

**ಲಿಂಗರಾಜ ಸಿ. ರೊಡ್ಡನವರ, 12ನೇ ಬ್ಯಾಚ್**



ಮಾತಿನಲ್ಲಿ ಹೇಳಲಾರೆನು ......
ರೇಖೆಯಲ್ಲಿ ಗೀಚಲಾರೆನು ...
ಆದರೂನು ಹಾಡದೆನೆ ಉಳಿಯಲಾರೆನು ...
ಅಂತ ಅನುಭವ.....ನನ್ನ ನವೋದಯ ......!

(ಮೊದಲನೇ ಬ್ಯಾಚಿನ ಚಂದ್ರಶೇಖರ್ ಉಪ್ಪಿನ್ ಈ ಸಂಚಿಕೆಗೆ ಬರಹ ಕೊಡದೇ ಇರಲು ಕೊಟ್ಟ ಕಾರಣ)

# ಭಾವ ಲಹರಿ

**ನದೀಮ್ ಸನದಿ**

## ಬದುಕು

ಗೆಳೆಯ ನೋಡು, ಬದುಕು ಇದುವೆ
ಎಷ್ಟು ಸುಂದರ.
ಕಷ್ಟ–ನಷ್ಟ; ಸುಖಃ–ದುಖಃಗಳ
ಮಿಲನ;
ವಿಶ್ವಮಂದಿರ
ಸಾಲ ತಪ್ಪಲಿಲ್ಲವೆಂದು
ಅಂಕ ಕದಿಮೆ ಬಂದವೆಂದು
ಮೆಚ್ಚಿದಾಕೆ ಸಿಗಲಿಲ್ಲವೆಂದು
ಕೊರಗುವ ನಮ್ಮೀ ಯುವಕ.।
ದುಡುಕಿ ಪ್ರಾಣ ತೆರುವನೀತ
ಎಂಥ ನಮ್ಮ ನಾಗರಿಕ।

ನೋವು ಉಂದಬಳಿಕವೆಮಗೆ
ಆಗುವುದು ಹರುಶದ ಹೂರಣ.।
ಕಗ್ಗತ್ತಲು ಸರಿದ ಮೇಲೆ
ಆಗುವದು ಸೂರ್ಯದರ್ಶನ..॥3॥

ಏನೇ ಕಷ್ಟ ಬಂದರೂನು
ಮುನ್ನಡೆ ನೀ ಬಾಗದೇ.।
ದೊರಕದೇನೂ ನಿನಗೆ ಸದಾ ಮುಂದೆ
ಮುಂದೆ– ಮುಂದೆ ಸಾಗದೆ..॥4॥

ಅರಿತು ನಡೆ ನೀನು ಮುಂದೆ
ಯಾತನೆ ಎಲ್ಲರಿಗುಂಟೆಂದು.।
ಜತೆಯಾಗಿರಿಸಿ ನೋವು–ನಲಿವುಗಳ
ಉಳಿಸು ಬಾಳಿನ ನಂಟು..॥5॥

ಸಾಲ,ಅಂಕ,ಪ್ರೀತಿಗಿಂತ
ಬದುಕು ಬಲು ದೊಡ್ಡದು.।
ಸೋತು ಶರಣು ಆಗಬೇಡ
ಸಾವಿಗೆ;
ಬದುಕು ಗೆಲ್ಲಲಾಗದು..॥6॥

## ನನ್ನ ಮಾತು

ಮೋಡಗವಿದ ಆ ದಿನ
ಏನೋ ಯೋಚಿಸುತ್ತ
ಅತ್ತಿತ್ತ ಅಲೆದಾಡುವಾಗ
ಅಂಕು–ಡೊಂಕಾಗಿ ಜಾರಿದವು
ನನ್ನ ಮಾತುಗಳು
ನನ್ನಾತ್ಮದ ಜೊತೆಗೂಡಿ.॥
ಎಲ್ಲೋ ಜನಸಂದಣಿಯಲಿ
ಯಾವುದೋ ನಗರದಲಿ,
ದಟ್ಟಡವಿಯಲಿ,
ಖಾಲಿ ಮೈದಾನದಲಿ,
ವಿಶಾಲ ಮರುಭೂಮಿಯಲಿ
ಹುಡುಕುತ್ತ;
ಜೀವನದ ಅರ್ಥ
ಮಾಡದೇ ಆವುದೇ ಮೋಡಿ.॥
ಕಾಣಿಸಿದಾಗ;
ಎಲ್ಲದರೂ ಹಸಿರು ನೆಲ
ಮೋಡಗಳ ಬಿಂಬ ತೋರಿಸುವ
ತಣ್ಣೀರಿನ ಕೊಳ.॥

ಪ್ರಯತ್ನಿಸುವವು ನನ್ನ ಮಾತುಗಳು
ತಮ್ಮ ತೃಷೆಯ ತಣಿಸಲು
ತಮ್ಮ ಇರುವು ಉಳಿಸಲು.॥
ನಿಲ್ಲಿಸದೇ ಮುಂದುವರೆಯುವುದನು
ಕಣಿವೆಯಾಳದಲಿ,
ಗಿರಿ–ಶಿಖರಗಳಲಿ,
ಶೋಧಿಸುತ್ತ;
ಸತ್ಯದ ಮಾರ್ಗವ ಹುಡುಕುತ್ತ..॥

## ಸ್ವಾತಂತ್ರ್ಯ

ಬೇಕಾಗಿಲ್ಲ ಅಧಿಕಾರ ನನಗೆ
ಕಾಯಿದೆ ಜಾರಿಗೊಳಿಸಲು.।
ಬೇಡ ನನಗೆ ಲೇಖನಿ
ಶಾಸನವ ಬರೆಯಲು..॥

ಬೇಡ ನಾಯಕರ ದಂಡು
ಸೇನೆ ಮುನ್ನಡೆಸಲು.।
ಬೇಡ ಸಂಶೋಧಕರು
ಖನಿಜಗಳ ಹುಡುಕಲು.॥

ಬೇಡ ನನಗೆ ವಿಮಾನ
ಪ್ರವಾಹಗಳ ನೋಡಲು.।
ಬೇಕಾಗಿಲ್ಲ ಬಾಟಲಿಗಳು
ರಕ್ತ ಶೇಖರಿಸಲು..॥

ಬೇಡ ನನಗೆ ಸಹಾಯಕ
ನನ್ನ ಮಾತು ಬರೆಯಲು.।
ಬೇಡ ಹಳೇ;
ಪುಸ್ತಕಗಳ ಗಂಟು
ಘೋಷಗಳ ಸಂಗ್ರಹಿಸಲು..॥

ಬೇಕಾಗಿಲ್ಲ ನನಗೆ ಪತಾಕೆ
ನನ್ನ ಖ್ಯಾತಿ ಸಾರಲು.।
ಬೇಡ ಯಾವುದೆ ಶಿಲೆಯು
ನನ್ನ ಹೆಸರು ಕೆತ್ತಲು..॥

ಬೇಕಾಗಿಹುದು ನನಗೆ
ಒಂದು ಖಾಲಿ ಕಾಗದ
"ಸ್ವಾತಂತ್ರ್ಯ"
ಎಂಬ ಮೂರಕ್ಷರ ಗೀಚಲು.।
ಯಾರಿಗೂ ಹೆದರದೆ
ಖಡ್ಗಗಳಿಗಂಜದೆ;
ಜೀವಿಸಲು..॥

# Indian National Mathematical Olympiad – An Experience

It was in the year 1997 that the National Board for Higher Mathematics in collaboration with Navodaya Vidayala Samiti announced that all the JNVs across India would form a region for Math Olympiad. Each state in the country acts as a region and conducts RMO(Regional Math Olympiad) and shortlists 30 students who then write INMO(Indian National Math Olympiad). Again 30 students who clear INMO are trained rigorously for a month, are given scholarships for their future studies and 5-6 best candidates out of the 30 are then sent to IMO(International Math Olympiad) to represent the country where they are awarded Gold, Silver, Bronze medals, just like the Olympics.

In JNV Dharwad, we students hardly knew anything other than our curriculum. The first teacher who made us look beyond the walls of the campus and educated us about the various competitive exams in the outside world was Ashok sir, PGT Maths. It was he who took me to the Olympiad Orientation Session at JNV Doddaballapur where they gave me a textbook.

The syllabus of the textbook had five chapters. Number theory, Combinatorics, Algebra, Inequalities and Geometry. There was no calculus. The exam duration would be for 4 hours and there would be 6 questions (Exam duration for IMO is 9 hours for the same number of questions). Even if you solve just one question correctly you have 99% of chance of passing the exam. No wonder why it is called the toughest exam on the earth and no wonder if you see most of the participants at IMO, they look as if they suffer from some sort of Asperger's syndrome.

Around 10 of us from 11th grade from JNV Dharwad went to Mysore to write the RMO exam for JNV(across India) region. While I was tensed, others were all in a party mood for this free trip. In the exam they underwent four hours of torture and most of them submitted blank answer sheets. About myself, I had precisely answered just one question correctly.

When the results came, I had cleared the RMO. It was sort of a triumph. The Principal of the school, Mr Devareddy sir started calling me 'Bhaskaracharya'. The next task, to clear the INMO looked like climbing the Everest.

Six students who had passed RMO from Hyderabad region were sent to training at JNV Mandya. I was the only candidate from Karnataka, 4 were from Kerala and one from Andhra (there are no JNVs in Tamil Nadu). Since all the keralites kept to themselves, I had no choice but to be with the Andhra guy, Rangareddy from JNV Nizamabad. Professors from IISc Bangalore were invited to train us for two weeks.

"In IIT, 99% of the questions don't repeat. In Olympiad 100% of the questions don't repeat", said Mr Venkatachala, Mr. Praneshachar, Mr. Yogananda, the IISc professors.

As they trained us, it was as if we lived in a different world. We had to focus, focus hard. Solving each problem was a challenge in itself. It was like solving a crime with minimal clues.

It was then that I noticed the genius of Rangareddy and realized how mediocre I was. He was razor sharp in solving problems in no time. He was short, normal looking boy, very down to earth. We became good friends. I was pretty sure if there was one guy in our group who could clear INMO it was him. He told me that his goal was to clear IIT JEE but his parents, poor farmers were unable to sponsor for his tuitions.

In a school bus, we six of us were taken to IISc Bangalore to write the exam. Even after four hours of struggle I couldn't answer a single question completely. Unfortunately even Rangareddy came out of the exam hall disappointed. He too hadn't answered a single question. For the first half an hour no one spoke in the bus heading back to Mandya. Then suddenly like an Archimedes, Rengareddy started talking. His brain was speeding faster than the bus itself. In the next one hour he had told me the answer for all the 6 questions! I was dumbstruck!! On the last day of the training the professors had given us a challenge question. Before leaving JNV Mandya I had told Rangareddy that I would contact him only when I solve that question.

Days passed, years passed. I couldn't solve the challenge question. After 10 years, Rangareddy pinged me in Orkut. I

was glad.

“I couldn’t solve that question at all” I told him disappointingly.

“Did you solve it?”, I asked out of curiosity

“I had gotten it then itself but wanted you to try”

“Did you clear IIT?”

“Yes”

“What do you do now?”

“I am working in a research unit in the IIT”

After that he suddenly disappeared from Orkut. I am still trying to find him. Hope he again appears online some day.

On one hand Math Olympiad changed me completely as a person by gifting confidence, creativity, focus and rational thinking. From that day every exam/entrance test/ recruitment test with analytical/quantitative/mathematical ability became a cakewalk; on the other hand it also discovered the hidden rural gems of JNVs like Rangareddy. This experience will stay close to me forever. Thank you JNV Dharwad.

**– Sajid Ali Kalmani**




## ನಿಮಗೂ ಈ ತರಹ ಅನಿಸಿರಬಹುದಾ?

ಅಯ್ಯೋ..! ಅಯ್ಯೋ ! ಮುಗಿತಿವೆ ಕಾಲೇಜ್ ದಿನ
ನಿಲ್ಲೋ.. ನಿಲ್ಲೋ.. ಅಂದ್ರೂ ನಿಲ್ಲುತ್ತಿಲ್ಲ ಕರೆಯುತಿದೆ
ಜಂಜಾಟದ ಜೀವನ
ತಲೆಮೇಲೆ ಕೈ ಹೊತ್ತು ಕುಳಿತಿದೆ ನಮ್ಮೀ ಯೌವ್ವನ
ಸ್ನೇಹಿತರಿಲ್ಲದೆ ಕಳೆಯುವುದು ಹೇಗೆ? ಎಂದು ಒಂದು ಕ್ಷಣ
ಆಗಿದ್ದಾಗಲಿ, ಮುಂದಿನ ಜನ್ಮವಿದೆ ಎಂದಾದರೆ ಈ ಗೆಳೆತನ
ಮತ್ತೆ ಕೂಡಲಿ ॥
ಗ್ರೀಟಿಂಗ್ ಕೊಡದೆ ಫ್ರೆಂಶಿಪ್ ಬೆಳೆಯಲಿ
ವೇಟಿಂಗ್ ಇರದ ಲವ್ ಸ್ಟೋರಿ ಹುಟ್ಟಲಿ
ಡೇಟಿಂಗ್, ಗಾಸಿಪ್ ಗಳಿರದ ಕಾಲೇಜ್ ಲೈಫ್ ಬೇಗ
ಎಂಡಾಗಲಿ
ಚಾಟಿಂಗ್ ಮಾಡದ ರಾತ್ರಿಗಳು ಬೇಗನೆ ಕಳೆಯಲಿ
ಮುಂದಿನ ಜನ್ಮವಿದೆ ಎಂದಾದರೆ ಮತ್ತೆ ಕೂಡಲಿ ಈ ಗೆಳೆತನ ॥
ಪೇರೆಂಟ್ಸ್ ಮೀಟಿಂಗ್ ಇರದ ಕಾಲೇಜ್ ಗೆ ನಮ್ಮ
ಅಡ್ಮಿಷನ್ನಾಗಲಿ
ಹಾಜರಿ, ಮಾದರಿ ಪ್ರಶ್ನೆಪತ್ರಿಕೆ ಕೊಡುವ ಪ್ರಿನ್ಸಿಪಾಲ್ ಪೋಸ್ಟಿಗೆ
ಬರಲಿ
ಹೋಂವರ್ಕ್ ಕೊಡದ ಟೀಚರ್ ನಮ್ಮ ಗುರುಗಳಾಗಲಿ
ಆನ್ಸರ್ ಶೀಟ್ ನಾವೇ ಕರೆಕ್ಟ ಮಾಡಿಕೊಳ್ಳುವ ರೂಲ್ಸ್
ಯೂನಿವರ್ಸಿಟಿದಾಗಲಿ
ಮುಂದಿನ ಜನ್ಮವಿದೆ ಎಂದಾದರೆ ಮತ್ತೆ ಕೂಡಲಿ ಈ ಗೆಳೆತನ ॥
ಚಡ್ಡಿ ಹಾಕುವ ಬಾಲ್ಯವು ಇನ್ನೊಮ್ಮೆ ಬರಲಿ
ಮುದ್ದನು ಮಾಡುವ ಅಪ್ಪ–ಅಮ್ಮ ಇವರೇ ಇರಲಿ
ದುಡ್ಡನು ಬಿಡುವ ಗಿಡಗಳು ನಮ್ಮ ಗಾರ್ಡನ್ ನಲ್ಲಿ ಬೆಳೆಯಲಿ
ಗುಂಡು ಹಾಕುವ ಸುಸಮಯ ಮತ್ತೆ ಮತ್ತೆ ಒದಗಿ ಬರಲಿ
ಮುಂದಿನ ಜನ್ಮವಿದೆ ಎಂದಾದರೆ ಮತ್ತೆ ಕೂಡಲಿ ಈ ಗೆಳೆತನ ॥

ಖುಷಿಯ ನಾಳೆಗಳು ಇವತ್ತೇ ಬರಲಿ
ಕಷ್ಟದ ನಿನ್ನೆಗಳು ಬಾರದೇ ಇರಲಿ
ಕೆಣಕಿದರೆ ರಾಂಗಾಗುವ ಹುಡುಗೀರು ಎದುರಿನ ಬೆಂಚಲಿ
ಕೂಡಲಿ
ಕೈ ಕೊಡದ ಹುಡುಗರು ಕನಸಲಿ ಹಾಜರಾಗಲಿ
ಮುಂದಿನ ಜನ್ಮವಿದೆ ಎಂದಾದರೆ ಮತ್ತೆ ಕೂಡಲಿ ಈ ಗೆಳೆತನ ॥

**ಡಾ. ವಿನಾಯಕ.ಜೆ.ಕೆ**
**13ನೇ ಬ್ಯಾಚ್**

